CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೨, ೨೦೦೫ (ಜೇಷ್ಠ ೧೨, ಶಕ ವರ್ಷ ೧೯೨೭) | ಸಂಚಿಕೆ ೨೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ: 14.12.2004 ಸಂಖ್ಯೆ: ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ.
2. ದಿನಾಂಕ: 20.12.2004 ಸಂಖ್ಯೆ: ಇಡಿ 329 ಯುಆರ್‌ಸಿ 2004ರ ಸರ್ಕಾರಿ ಪತ್ರ.
3. ದಿನಾಂಕ: 20.12.2004 ಸಂಖ್ಯೆ: F.SRO/NCTE/2004-05/9485ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.
4. ದಿನಾಂಕ: 30.12.2004 ಸಂಖ್ಯೆ: ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ.
5. ದಿನಾಂಕ: 24.12.2004 ಸಂಖ್ಯೆ: F.SRO/NCTE/B.ED/2004-05/95925ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.
6. ದಿನಾಂಕ: 02.02.2005 ಸಂಖ್ಯೆ: F.SRO/NCTE/2004-05/379ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
7. ದಿನಾಂಕ: 15.02.2005ರ ಸಂಖ್ಯೆ: F.SRO/NCTE/2004-05/674ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಟಿಸಿಹೆಚ್ ಮತ್ತು ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಅಂತೆಯೇ, 2004-2005ನೇ ಶೈಕ್ಷಣಿಕ ಸಾಲಿನ ಬಿ.ಎಡ್ ಕೋರ್ಸಿನ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಅನುವಾಗುವಂತೆ ಎನ್‌ಸಿಟಿಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ತಕ್ಷಣ ಒದಗಿಸುವಂತೆ ಎನ್‌ಸಿಟಿಇ-ಎಸ್.ಆರ್.ಸಿ.ಯ ಪ್ರಾದೇಶಿಕ ನಿರ್ದೇಶಕರನ್ನು ಕೋರಲಾಗಿತ್ತು. ಇದನ್ನು ಪ್ರತಿಕ್ರಯಿಸಿ ದಿನಾಂಕ: 02.02.2005ರ ಪತ್ರದಲ್ಲಿ ಎನ್‌ಸಿಟಿಇಯು ಇತ್ತೀಚೆಗೆ 2004-05ನೇ ಸಾಲಿಗೆ ಹೊಸದಾಗಿ 6 (ಆರು) ಬಿ.ಎಡ್ ಕಾಲೇಜುಗಳಿಗೆ ದಿನಾಂಕ: 15.02.2005 ಮಾನ್ಯತೆ ನೀಡಿರುವ ಪಟ್ಟಿಯನ್ನು ಒದಗಿಸಿದೆ. ಅಲ್ಲದೆ, ಬಿಜಾಪುರದ ಮಹಿಳಾ ವಿಶ್ವವಿದ್ಯಾಲಯದಲ್ಲಿ 2004-2005ನೇ ಶೈಕ್ಷಣಿಕ ಸಾಲಿನಿಂದ ಬಿ.ಎಡ್ ಕೋರ್ಸನ್ನು ನಡೆಸಲು ಎಐಸಿಟಿಇಯು ದಿನಾಂಕ: 24.12.2004ರ ಪತ್ರದಲ್ಲಿ ಮಾನ್ಯತೆ ನೀಡಿದೆ. ಈ ಹಿನ್ನೆಲೆಯಲ್ಲಿ ಸದರಿ ಕಾಲೇಜುಗಳ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆಯನ್ನು ಸಂವೀಕ್ಷಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 329 ಯುಆರ್‌ಸಿ 2004 (ಭಾಗ-2), ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

3) ದಿನಾಂಕ: 14.12.2004 ಸಂಖ್ಯೆ: ಇಡಿ 329 ಯುಆರ್‌ಸಿ 2004 ಹಾಗೂ ದಿನಾಂಕ: 30.12.2004ರ ಸಂಖ್ಯೆ: ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶಗಳನ್ನು ಮುಂದುವರೆಸುತ್ತಾ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ

ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ ಮತ್ತು ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಈ ಕೆಳಕಂಡ 6 (ಆರು) ಹೊಸ ಬಿ.ಎಡ್ ಕಾಲೇಜುಗಳ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಲಾಗಿದೆ. ಸದರಿ ಶಿಕ್ಷಣ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶವು ದಿನಾಂಕ: 14.12.2004 ಮತ್ತು 30.12.2004ರ ಸಂಖ್ಯೆ: ಇಡಿ 329 ಯುಆರ್‌ಸಿ 2004ರ ಆದೇಶಗಳಲ್ಲಿ ಸ್ಪಷ್ಟಪಡಿಸಲಾದ ಷರತ್ತುಗಳಿಗೆ ಒಳಪಟ್ಟಿರುತ್ತವೆ.

| ಕ್ರ. ಸಂ. | ಕಾಲೇಜುಗಳ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| | **ಬೆಂಗಳೂರು ನಗರ ಜಿಲ್ಲೆ** | | |
| 1 | ಮಹರ್ಷಿ ಸವಿತ ಕಾಲೇಜ್ ಆಫ್ ಎಜುಕೇಷನ್, ಎನ್.ಜಿ.ಇ. ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು-560 094 | 100 | |
| 2 | ಮಂಜುಳ ಮಲ್ಲೇಶ್ ಕಾಲೇಜ್ ಆಫ್ ಎಜುಕೇಷನ್, ಕೆನರಾ ಬ್ಯಾಂಕ್ ಕಾಲೋನಿ, ನಾಗರಬಾವಿ ರೋಡ್, ಬೆಂಗಳೂರು-560 072 | 100 | |
| | **ಕೋಲಾರ ಜಿಲ್ಲೆ** | | |
| 3 | ರಾಜೀವ್ ಗಾಂಧಿ ಬಿ.ಎಡ್ ಕಾಲೇಜ್, ಮುಳಬಾಗಿಲು ಟೌನ್-563 131, ಕೋಲಾರ ಜಿಲ್ಲೆ | 100 | |
| | **ಬಿಜಾಪುರ ಜಿಲ್ಲೆ** | | |
| 4 | ಕರ್ನಾಟಕ ಟೀಚರ್ಸ್ ಕಾಲೇಜ್, ಬಿಜಾಪುರ ರೋಡ್, ಇಂಡಿ-586 209, ಬಿಜಾಪುರ ಜಿಲ್ಲೆ. | 100 | |
| 5 | ಯೂನಿವರ್ಸಿಟಿ ಕಾಲೇಜ್ ಆಫ್ ಎಜುಕೇಷನ್ ಫಾರ್ ವುಮೆನ್, ಬಿಜಾಪುರ-586 101 | 100 | ಎಲ್ಲಾ 100 ಸೀಟುಗಳನ್ನು CAC ಮುಖಾಂತರ ಭರ್ತಿಮಾಡಲಾಗುವುದು |
| | **ಮಂಡ್ಯ ಜಿಲ್ಲೆ** | | |
| 6 | ಭಗವಾನ್ ಬುದ್ಧ ಕಾಲೇಜ್ ಆಫ್ ಎಜುಕೇಷನ್, 1706, 5ನೇ ಕ್ರಾಸ್, 2ನೇ ಬ್ಲಾಕ್, ಸಿದ್ಧಾರ್ಥನಗರ, ಮಳವಳ್ಳಿ-571 430, ಮಂಡ್ಯ ಜಿಲ್ಲೆ. | 100 | |

4) ಕೇಂದ್ರೀಕೃತ ಪ್ರವೇಶ ಘಟಕದ ವಿಶೇಷಾಧಿಕಾರಿಯವರು ಈ ಆದೇಶದಲ್ಲಿನ ಅನುಬಂಧದಲ್ಲಿ ನಿರ್ದಿಷ್ಟಪಡಿಸಲಾಗಿರುವ ಎನ್.ಸಿ.ಟಿ.ಇ. ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳಿಗೆ ಮಾತ್ರ ಎನ್‌ಸಿಟಿಇ ಅನುಮೋದಿಸಿರುವ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ 1999ರ ನಿಯಮಗಳ ನಿಯಮ 2 (ಜೆ) ಯಲ್ಲಿ ನಿಗದಿಪಡಿಸಿರುವ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವಿತರಣೆ ಮಾಡತಕ್ಕದ್ದು. ಆದರೆ ಸಿಎಸಿಯ ಪ್ರವೇಶ ಪ್ರಕ್ರಿಯೆ ಮುಕ್ತಾಯಗೊಳ್ಳುವ ಮುನ್ನ ಎನ್‌ಸಿಟಿಇ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಿ ಮಾನ್ಯತೆಯನ್ನು ನೀಡಿದಲ್ಲಿ ಕೇಂದ್ರೀಕೃತ ಪ್ರವೇಶ ಘಟಕವು ಅಂತಹ ಕಾಲೇಜುಗಳಿಗೆ ಮಂಜೂರಾದ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ನಿರ್ದಿಷ್ಟಪಡಿಸಿರುವ ಕೋಟಾ ನಿಯಮವನ್ನು ಅನುಸರಿಸಿ ವಿದ್ಯಾರ್ಥಿಗಳನ್ನು ವಿತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 551 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2004-2005 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಹದಿನಾರು ಜಿಲ್ಲಾ ಪಂಚಾಯತ್‌ಗಳಿಗೆ ಪೂರ್ವಸ್ಥಿತಿಗೆ ತಂದು (Restoration) ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಎರಡನೇ ಕಂತಿನ ಹಣ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:** (1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ :ಆರ್ 17014 : 12 : 2004 ಡಿಆರ್‌ಡಿಎ (ಎಸ್‌ಆರ್ ನಂ.20) ದಿನಾಂಕ 28.04.2004, 21-12-2004, (ಎಸ್‌ಆರ್ ನಂ.155), ದಿನಾಂಕ 03-02-2005, ಎಸ್ ನಂ.177), ದಿನಾಂಕ 17-02-2005 ಮತ್ತು ಎಸ್ ನಂ.194 ದಿನಾಂಕ 10.03.2005.

(2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 04 ದಿ: 22-05-2004, 22-01-2005, 07-03-2005 ಮತ್ತು 17.03.2005.

(3) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್17014 / 12 / 2004 ಡಿಆರ್‌ಡಿಎ (ಎಸ್ ನಂ.217) ದಿನಾಂಕ 18-03-2005 ಮತ್ತು (ಎಸ್ ನಂ.232) ದಿನಾಂಕ: 23.03.2005.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2004-05 ನೇ ಸಾಲಿಗೆ ಒಂದನೇ ಕಂತಿನ ಹಣ ಅನುಕ್ರಮವಾಗಿ ರೂ.5,10,68,000, ರೂ.1,70,23,000 ಹಾಗೂ 2ನೇ ಕಂತಿನ ಹಣ ರೂ.2,62,84,000-00 ಹಾಗೂ ರೂ.87,63,000 ಗಳನ್ನು 25 ಜಿಲ್ಲೆಗಳಿಗೆ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಈಗ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಎರಡನೇ ಕಂತಿನ ಹಣ ರೂ.15.49 ಲಕ್ಷ ಹಾಗೂ ರಾಜ್ಯದ 16 ಜಿಲ್ಲೆಗಳಿಗೆ ಕಡಿತಗೊಳಿಸಿದ ಎರಡನೇ ಕಂತಿನ ಹಣವನ್ನು ಪೂರ್ವಸ್ಥಿತಿಗೆ ತಂದು ರೂ.1,39,65,000

ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಕೇಂದ್ರದ ಅನುದಾನಕ್ಕನುಗುಣವಾಗಿ 17 ಜಿಲ್ಲೆಗಳಿಗೆ ರೂ.56,29,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

ರಾಜ್ಯ ಸರ್ಕಾರವು ಈ ಕೆಳಕಂಡ 17 ಜಿಲ್ಲಾ ಪಂಚಾಯತ್‌ಗಳಿಗೆ ಆಡಳಿತ ವೆಚ್ಚಕ್ಕಾಗಿ ಎರಡನೇ ಕಂತಿನ ಹಣ ರೂ. 56,29,000 ಗಳನ್ನು (ರೂ. ಐವತ್ತಾರು ಲಕ್ಷದ ಇಪ್ಪತ್ತೊಂಬತ್ತು ಸಾವಿರ ಮಾತ್ರ) ಅನುಬಂಧದಲ್ಲಿ ತೋರಿಸಿರುವಂತೆ ಕೆಳಗಿನ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) 2004-2005 ನೇ ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201).

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 93 ಪಿಬಿಐಎಸ್ 05 ದಿನಾಂಕ 29-03-2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ. 39 /05 ದಿನಾಂಕ 29-03-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 29-03-2005 ಕ್ಕೆ ಅನುಬಂಧ**

(Restoration) (ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾಪಂಚಾಯತಿಯ ಹೆಸರು | ಜಿಲ್ಲಾ ಪಂಚಾಯತಿಯ ಕೋಡ್ | ಡಿ.ಡಿ.ಒ ಕೋಡ್ | ಬಿಡುಗಡೆಯಾಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ |
|---|---|---|---|---|---|
| 1 | 2 | 3 | 4 | 5 | 6 |
| 1 | ಬಳ್ಳಾರಿ | 418 | 3400ZZ0001 | 7,66,000 | 2,55,000 |
| 2 | ಬೀದರ್ | 419 | 3800ZZ5701 | 6,18,000 | 2,06,000 |
| 3 | ಬಿಜಾಪುರ | 414 | 2800ZZ9152 | 6,18,000 | 2,06,000 |
| 4 | ಚಾಮರಾಜನಗರ | 456 | 1000ZZ0001 | 10,78,000 | 3,59,000 |
| 5 | ಚಿಕ್ಕಮಗಳೂರು | 408 | 1800ZZ0017 | 19,88,000 | 6,63,000 |
| 6 | ಚಿತ್ರದುರ್ಗ | 403 | 1600ZZ0001 | 7,66,000 | 2,55,000 |
| 7 | ದಕ್ಷಿಣ ಕನ್ನಡ | 409 | 1900ZZ0047 | 6,18,000 | 2,06,000 |
| 8 | ದಾವಣಗೆರೆ | 451 | 1700ZZ0002 | 16,69,000 | 5,56,000 |
| 9 | ಧಾರವಾಡ* | 415 | 2500ZZ8798 | 6,19,000 | 4,97,000 |
| 10 | ಗದಗ್ | 462 | 2600ZZ0001 | 11,15,000 | 3,72,000 |
| 11 | ಹಾಸನ | 410 | 1300ZZ0003 | 7,69,000 | 2,56,000 |
| 12 | ಕೊಪ್ಪಳ | 466 | 1500ZZ0010 | 6,17,000 | 2,06,000 |
| 13 | ಮಂಡ್ಯ* | 412 | 1100ZZ0001 | 4,25,000 | 3,10,000 |

| 1 | 2 | 3 | 4 | 5 | 6 |
|---|---|---|---|---|---|
| 14 | ಮೈಸೂರು | 407 | 0900ZZ0001 | 7,65,000 | 2,55,000 |
| 15 | ತುಮಕೂರು | 406 | 0800ZZ0001 | 7,65,000 | 2,55,000 |
| 16 | ಉಡುಪಿ | 457 | 2000ZZ0001 | 7,69,000 | 2,56,000 |
| | ಒಟ್ಟು | | | **1,39,65,000** | **51,13,000** |
| | **2ನೇ ಕಂತು** | | | | |
| 17 | ಬೆಂಗಳೂರು (ಗ್ರಾ) | 402 | 0300ZZ8001 | 15,49,000 | 5,16,000 |
| | ಒಟ್ಟು | | | **1,55,15,000** | **56,29,000** |

*ಧಾರವಾಡ ಮತ್ತು ಮಂಡ್ಯ ಜಿಲ್ಲೆಗಳಿಗೆ 2ನೇ ಕಂತಿನ ರಾಜ್ಯದ ಪಾಲಿನ ಉಳಿಕೆ ಹಣ ರೂ.2,91,000 ಮತ್ತು ರೂ.1,69,000 ಗಳನ್ನು ಬಿಡುಗಡೆ ಮಾಡಲಾಗಿದೆ.

ಜಿ.ಬಿ. ಹಿರೇಮಣಿಯವರ್
ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Sub:** Release of II instalment RESTORATION of State share under DRDA Administration during 2004-2005 to 16 Zilla Panchayats and Release of II instalment to Bangalore Rural Zilla Panchayat - Reg. (25 % of the Allocation).

**Read:** (1) Govt. of India Ltr. No. R-17014/12/2004 - DRDA (Sr.No.20) Dtd: 28-04-2004, 21-12-2004, (Sr.No.155) Dtd. 03-02-2005, (S.No.177) Dtd. 17-02-2005 & S.No.194 Dtd. 10.03.2005.

(2) Government Order No. RDP 5 SJY (DRDA) 04, dated: 22-05-2004, 22-01-2005, 07-03-2005 & 17-03-2005.

(3) GOI Ltr.No. R-17014/12/2004-DRDA (S.No.217) Dtd. 18-03-2005 & (S.No.232) Dtd: 23.03.2005.

**PREAMBLE :**

Government of India and State Government have released Rs.5,10,68,000.00 / Rs.1,70,23,000.00 as first instalment to all Zilla Panchayats, Rs.2,62,84,000.00 / Rs.87,63,000.00 to 25 Zilla Panchayats respectively for the year 2004-2005. Now the Central Government has released Rs.15,49,000 to Bangalore Rural as II instalment and Rs.1,39,65,000 towards II instalment restoration to 16 Zilla Panchayats. Accordingly the State Government has to release Rs.56,29,000 to 17 Zilla Panchayats only. Hence this order.

**GOVERNMENT ORDER No : RDP 5 SJY (DRDA) 2004, BANGALORE, Dated : 29th March 2005.**

Sanction of the Government is hereby accorded for release of II instalment of Rs.56,29,000 (Rupees Fifty six Lakh twenty nine thousand only) towards Administrative Expenses to 17 Zilla Panchayats as per the Annexure.

**The conditions are as follows:-**

The amount should be utilised only for the meeting the salary expenditure and contingent expenditure as per the DRDA Administration Guidelines 99. The amount should not be utilised for any other purpose.

The funding pattern under the scheme will be 75 :25 between the Centre and the State.

The expenditure on the scheme shall be debitable to the Head of Account 2515-other Rural Development Programmes-00-196-Assistance to Zilla Panchayats-1-Zilla Panchayats-06-DRDA Administrative Charges-201-Grant-in-Aid for Zilla Panchayats (Plan) 2004-2005 (2515-00-196-1-06-201).

The release of funds is subject to audit by Internal Audit of the Department of Rural Development.

The Chief Accounts Officer of the concerned Zilla Panchayats are authorised to draw amount as per rules.

The Deputy Secretary (Admn) of the concerned Zilla Panchayats should submit approved annual plan for 2004-2005.

The Chief Accounts Officer of the concerned Zilla Panchayats should submit monthly expenditure statement along with the post wise details of the staff to the Director (SEP), Rural Development and Panchayat Raj Department by 10th of every succeeding month.

The Chief Accounts Officer of the concerned Zilla Panchayats should send audited statement of accounts and utilisation certificate to the Director (SEP) & E/o Deputy Secretary to Government, Rural Development & Panchayat Raj Department.

This order issues with the concurrence of the Internal Financial Advisor's Note No.RDP 93 PBS 05 Dtd: 29-03-2005 & Receipt and Issues section Unique No.39/05 Dated :29-03-2005.

By Order and in the Name of the Governor of Karnataka,

**G.B. Hiremaniyavar**

Director (SEP), & E/o Deputy Secretary to Government,
Rural Development & Pan. Raj Department.

**ANNEXURE TO GOVERNMENT ORDER No: RDP 5 SJY (DRDA) 2004, BANGALORE, Dated: 17-03-2005 (Restoration)**

**(In Rupees)**

| Sl. No. | Name of the Zilla Panchayat | Zilla Panchayat Code | D.D.O. Code | Central Share released (II instalment) | State share being released (II instalment) |
|---|---|---|---|---|---|
| 1 | Bellary | 418 | 3400ZZ0001 | 7,66,000 | 2,55,000 |
| 2 | Bidar | 419 | 3800ZZ5701 | 6,18,000 | 2,06,000 |
| 3 | Bijapur | 414 | 2800ZZ9152 | 6,18,000 | 2,06,000 |
| 4 | Chamarajnagar | 456 | 1000ZZ0001 | 10,78,000 | 3,59,000 |
| 5 | Chickmagalur | 408 | 1800ZZ0017 | 19,88,000 | 6,63,000 |
| 6 | Chitradurga | 403 | 1600ZZ0001 | 7,66,000 | 2,55,000 |
| 7 | D. Kannada | 409 | 1900ZZ0047 | 6,18,000 | 2,06,000 |
| 8 | Davanagere | 451 | 1700ZZ0002 | 16,69,000 | 5,56,000 |
| 9 | Dharwad* | 415 | 2500ZZ8798 | 6,19,000 | 4,97,000 |
| 10 | Gadag | 462 | 2600ZZ0001 | 11,15,000 | 3,72,000 |
| 11 | Hassan | 410 | 1300ZZ0003 | 7,69,000 | 2,56,000 |
| 12 | Koppal | 466 | 1500ZZ0010 | 6,17,000 | 2,06,000 |
| 13 | Mandya * | 412 | 1100ZZ0001 | 4,25,000 | 3,10,000 |
| 14 | Mysore | 407 | 0900ZZ0001 | 7,65,000 | 2,55,000 |
| 15 | Tumkur | 406 | 0800ZZ0001 | 7,65,000 | 2,55,000 |
| 16 | Udupi | 457 | 2000ZZ0001 | 7,69,000 | 2,56,000 |
| | **Total:** | | | **1,39,65,000** | **51,13,000** |
| | | | **II Instalment** | | |
| 17 | Bangalore (R) | 402 | 0300ZZ8001 | 15,49,000 | 5,16,000 |
| | **Total:** | | | **1,55,15,000** | **56,29,000** |

* II Instalment of State share balance amount of Rs.2,91,000 and Rs.1,69,000 has been released to Dharwad and Mandya District respectively.

**G.B. Hiremaniyavar**

Director (SEP), & E/o Deputy Secretary to Government,
Rural Development & Pan. Raj Department.

P.R. 574

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ವೈದ್ಯರ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1) ಆದೇಶ ಸಂಖ್ಯೆ: ಆಕುಕ 475 ಪಿಐಎಂ 95, ದಿನಾಂಕ: 7.9.95 ಹಾಗೂ ದಿನಾಂಕ: 17.11.97.
2) ಆದೇಶ ಸಂಖ್ಯೆ: ಆಕುಕ 434 ಪಿಐಎಂ 98, ದಿನಾಂಕ: 9.11.98.
3) ಸರ್ಕಾರಿ ಆದೇಶ ಸಂಖ್ಯೆ: ಆಕುಕ 502 ಪಿಐಎಂ 99, ದಿನಾಂಕ: 3.12.1999.
4) ಸರ್ಕಾರಿ ಆದೇಶ ಸಂಖ್ಯೆ: ಆಕುಕ 749 ಪಿಐಎಂ 2000, ದಿನಾಂಕ: 11.1.2001.
5) ಸರ್ಕಾರದ ಆದೇಶ ಸಂಖ್ಯೆ: ಆಕುಕ 391 ಪಿಐಎಂ 2001, ದಿನಾಂಕ: 14.11.2002.
6) ಸರ್ಕಾರದ ಆದೇಶ ಸಂಖ್ಯೆ: ಆಕುಕ 409 ಪಿಐಎಂ 2002, ದಿನಾಂಕ: 4.1.2003 ಹಾಗೂ ಸೇರ್ಪಡೆ ದಿ: 6.2.2003.
7) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಭಾವೈಪ:71:ಸಿಬ್ಬಂದಿ(4):2003-2004, ದಿನಾಂಕ: 9.10.2003, 8.10.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶ ದಿನಾಂಕ: 7.9.95 ರಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಚಿಕಿತ್ಸೆ ಪದ್ಧತಿಗಳಲ್ಲಿ ಖಾಲಿ ಇರುವ ವೈದ್ಯರು ಹುದ್ದೆಗಳಿಗೆ ಜಿಲ್ಲಾವಾರು ಗುತ್ತಿಗೆ ಆಧಾರದ ಮೇಲೆ ವೈದ್ಯರುಗಳನ್ನು ಒಂದು ವರ್ಷದ ಮಟ್ಟಿಗೆ ನೇಮಕ ಮಾಡಿಕೊಳ್ಳಲಾಗಿದೆ.

ಮೇಲೆ (1) ಮತ್ತು (2) ರಲ್ಲಿ ಓದಲಾದ ಆದೇಶ ದಿನಾಂಕ: 17.11.97 ಮತ್ತು 9.11.98 ರಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಪದ್ಧತಿಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ವೈದ್ಯರುಗಳನ್ನು ದಿನಾಂಕ: 17.11.98 ರಿಂದ ಪುನಃ ಒಂದು ವರ್ಷದವರೆಗೆ ಮಾತ್ರ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿತ್ತು.

ಮೇಲೆ (3)ರ ಸರ್ಕಾರದ ಆದೇಶದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಪದ್ಧತಿಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ವೈದ್ಯರುಗಳನ್ನು ದಿನಾಂಕ: 3.12.1999 ರಿಂದ ಪುನಃ ಒಂದು ವರ್ಷದವರೆಗೆ ಮಾತ್ರ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿತ್ತು.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಮತ್ತು ಯೋಗ ಪದ್ಧತಿಗಳ ಗುತ್ತಿಗೆ ವೈದ್ಯರುಗಳ ಸೇವೆಯನ್ನು ದಿನಾಂಕ: 17.11.2000 ರಿಂದ ಪುನಃ ಒಂದು ವರ್ಷದವರೆಗೆ ಮಾತ್ರ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಮತ್ತು ಯೋಗ ಪದ್ಧತಿಗಳಲ್ಲಿ ನೇಮಕಗೊಂಡ ಗುತ್ತಿಗೆ ವೈದ್ಯರುಗಳು 5 ವರ್ಷಗಳ ಸೇವೆಯನ್ನು ಗುತ್ತಿಗೆ ಆಧಾರದ ಮೇಲೆ ಪೂರೈಸಿರುವ 75 ವೈದ್ಯರುಗಳ ಸೇವೆಯನ್ನು 17.11.2001 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಮುಂದುವರಿಸಲಾಗಿದೆ.

ಮೇಲೆ ಓದಲಾದ (6)ರ ಸರ್ಕಾರದ ಆದೇಶದಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಮತ್ತು ಯೋಗ ಪದ್ಧತಿಗಳಲ್ಲಿ ನೇಮಕಗೊಂಡ ಗುತ್ತಿಗೆ ವೈದ್ಯರುಗಳ 5 ವರ್ಷಗಳ ಸೇವೆಯನ್ನು ಪೂರ್ಣಗೊಳ್ಳದೆ ಇರುವ 169 ಗುತ್ತಿಗೆ ವೈದ್ಯರ ಸೇವೆಯನ್ನು ದಿನಾಂಕ: 17.11.2001 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಮೇಲೆ ಓದಲಾದ (7)ರ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರಗಳಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಗುತ್ತಿಗೆ ವೈದ್ಯರಾಗಿ ಸೇವೆ ಸಲ್ಲಿಸುತ್ತಿರುವ 5 ವರ್ಷ ಪೂರ್ಣಗೊಳ್ಳದೆ ಇರುವ 162 ಗುತ್ತಿಗೆ ವೈದ್ಯರ ಸೇವೆಯನ್ನು ದಿನಾಂಕ: 17.11.2002 ರಿಂದ ಒಂದು ವರ್ಷ ಅಥವಾ ವೈದ್ಯರು ದರ್ಜೆ-2 ವೈದ್ಯರುಗಳ ಕ್ರಮಬದ್ಧ ನೇಮಕಾತಿ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 141 ಪಿಐಎಂ 2004, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವಿವಿಧ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಗಳಲ್ಲಿ ನೇಮಕಗೊಂಡ ಗುತ್ತಿಗೆ ವೈದ್ಯರುಗಳ 5 ವರ್ಷಗಳ ಸೇವೆಯನ್ನು ಪೂರ್ಣಗೊಳ್ಳದೆ 162 ಗುತ್ತಿಗೆ ವೈದ್ಯರ ಸೇವೆಯನ್ನು (ಅನುಬಂಧ ಲಗತ್ತಿಸಿದೆ) ದಿನಾಂಕ: 17.11.2002 ರಿಂದ ಎರಡು ವರ್ಷದ ಅವಧಿಗೆ ಅಥವಾ ಈ ಹುದ್ದೆಗಳನ್ನು ಕ್ರಮಬದ್ಧವಾಗಿ ತುಂಬುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ANNEXURE-I**

**DEPARTMENT OF INDIAN SYSTEMS OF MEDICINE AND HOMOEOPATHY**

**List of Contract Doctors who have been appointed and not completed 5 years**

| Sl.No. | Name of the Doctors | Govt. Order No. & Date | Date of Duty Report |
|---|---|---|---|
| | **AYURVEDA** | | |
| 1. | Dr. Dyavanagowder B.S. | HFW/201/PIM/1999 01.01.2000 | 23.01.2000 |
| 2. | Dr. Revya Nayaka | HFW/616/PIM/2000 11.07.2000 | 09.08.2001 |
| 3. | Dr. Shanthamurthy V. | HFW/201/PIM/1999 01.01.2000 | 20.01.2000 |
| 4. | Dr. Yogendrakumar V.U. | HFW/201/PIM/1999 01.01.2000 | 20.01.2000 |
| 5. | Dr. Prabhudev K.M. | HFW/616/PIM/2000 11.07.2000 | 28.07.2001 |
| 6. | Dr. Sadashiva Veerappa K. | HFW/201/PIM/1999 01.01.2000 | 20.01.2000 |
| 7. | Dr. Veeranna | HFW/351/PIM/2000 08.08.2001 | 29.08.2001 |
| 8. | Dr. Nirupama | HFW/351/PIM/2000 08.08.2001 | 29.08.2001 |
| 9. | Dr. Suchithra | HFW/351/PIM/2000 08.08.2001 | 27.08.2001 |
| 10. | Dr. Jadhav Kemudamma | HFW/351/PIM/2000 08.08.2001 | 29.08.2001 |

| Sl.No. | Name of the Doctors | Govt. Order No. & Date | Date of Duty Report |
|---|---|---|---|
| 11. | Dr. Umesh Reddy C.L. | HFW/ 40/PIM/2000 07.06.2000 | 24.06.2000 |
| 12. | Dr. Shivkumar B. | HFW/ 40/PIM/2000 07.06.2000 | 23.06.2000 |
| 13. | Dr. Kumaraswamy S.R. | HFW/ 40/PIM/2000 07.06.2000 | 01.07.2000 |
| 14. | Dr. Shekaraiah G. Math | HFW/ 40/PIM/2000 02.11.2000 | 23.11.2000 |
| 15. | Dr. Umesh C. Palegar | HFW/ 40/PIM/2000 07.06.2000 | 24.06.2000 |
| 16. | Dr. Satish G.V. | HFW/ 40/PIM/2000 07.06.2000 | 30.06.2000 |
| 17. | Dr. Prabhu M.S. | HFW/ 40/PIM/2000 20.09.2001 | 24.05.2001 |
| 18. | Dr. Shobhadevi M.T. | HFW/ 40/PIM/2000 18.06.2002 | 25.06.2002 |
| 19. | Dr. Hanumanthappa Reddy V. | HFW/ 40/PIM/2000 07.06.2000 | 23.06.2000 |
| 20. | Dr. Satish M.B. | HFW/ 40/PIM/2000 07.06.2000 | 23.06.2000 |
| 21. | Dr. Shobha S. | HFW/ 40/PIM/2000 02.04.2002 | 17.04.2002 |
| 22. | Dr. Padma N.P. | HFW/ 40/PIM/2000 20.09.2001 | 27.05.2001 |
| 23. | Dr. Bheemanagowda Savajji | HFW/362/PIM/2000 16.08.2001 | 27.09.2001 |
| 24. | Dr. Geetha S.K. | HFW/ 40/PIM/2000 07.06.2000 | 23.06.2000 |
| 25. | Dr. Manjula R. | HFW/ 40/PIM/2000 07.06.2000 | 26.06.2000 |
| 26. | Dr. Naveenkumar | HFW/144/PIM/2000 17.06.2000 | 03.07.2000 |
| 27. | Dr. Ravi S.K. | HFW/144/PIM/2000 17.06.2000 | 24.07.2000 |
| 28. | Dr. Sanjay M.S. | HFW/144/PIM/2000 20.04.2001 | 28.04.2001 |
| 29. | Dr. Malathi A.N. | HFW/144/PIM/2000 24.04.2001 | 21.05.2001 |
| 30. | Dr. Anand K.V. | HFW/144/PIM/2000 30.10.2001 | 17.11.2001 |
| 31. | Dr. Rangappa H. | HFW/143/PIM/2000 29.04.2000 | 25.06.2000 |
| 32. | Dr. Shashikala T. | HFW/143/PIM/2000 29.04.2000 | 23.06.2000 |
| 33. | Dr. Ravindra S. Chapparavalli | HFW/223/PIM/1999 01.07.2000 | 13.07.2000 |
| 34. | Dr. Ganesh Bhat K.G. | HFW/127/PIM/2000 11.04.2002 | 27.07.2000 |
| 35. | Dr. Kamalakar George Arale | HFW/127/PIM/2000 15.12.2000 | 24.12.2000 |
| 36. | Dr. Sheela S.M. | HFW/233/PIM/1999 01.07.2000 | 11.07.2000 |
| 37. | Dr. Parashuram L. Devaragudda | HFW/127/PIM/2000 11.04.2002 | 26.04.2002 |
| 38. | Dr. Basavaraj R. Talawar | HFW/127/PIM/2000 11.04.2002 | 04.05.2002 |
| 39. | Dr. Parimala P. | HFW/233/PIM/1999 01.07.2000 | 13.07.2000 |
| 40. | Dr. Babasaheb Janglappanavar | HFW/233/PIM/1999 01.07.2000 | 13.07.2000 |
| 41. | Dr. Rathnashekara P. | HFW/233/PIM/1999 01.07.2000 | 16.07.2000 |
| 42. | Dr. Somshekar Rathod | HFW/233/PIM/1999 01.07.2000 | 25.07.2000 |
| 43. | Dr. Gowtham L.R. | HFW/127/PIM/2000 11.04.2002 | 24.04.2002 |
| 44. | Dr. Vijaykumar D.S. | HFW/233/PIM/1999 01.07.2000 | 13.07.2000 |
| 45. | Dr. Aravind M.S. | HFW/127/PIM/2000 11.04.2002 | 04.05.2002 |
| 46. | Dr. Hemalatha I.P. | HFW/127/PIM/2000 11.04.2002 | 24.12.2000 |
| 47. | Dr. Shobha N. Kadur | HFW/233/PIM/1999 01.07.2000 | 13.07.2000 |
| 48. | Dr. Gowtham Sharash Chandra Kollar | HFW/233/PIM/1999 01.07.2000 | 13.07.2000 |
| 49. | Dr. Umesh Bhat V. | HFW/233/PIM/1999 01.07.2000 | 13.07.2000 |
| 50. | Dr. Sujatha A. Shetty | HFW/127/PIM/2000 11.04.2002 | 04.05.2002 |
| 51. | Dr. Chethan S.S. | HFW/233/PIM/1999 01.07.2000 | 13.07.2000 |
| 52. | Dr. Kubera H. Naik | HFW/233/PIM/1999 01.07.2000 | 23.07.2000 |
| 53. | Dr. Vivekananda L. Biradar | HFW/233/PIM/1999 01.07.2000 | 15.07.2000 |
| 54. | Dr. Shalini D. | HFW/127/PIM/2000 11.04.2002 | 24.04.2002 |
| 55. | Dr. Raviraj D.B. | HFW/233/PIM/1999 01.07.2000 | 13.07.2000 |
| 56. | Dr. Shivakumar Barki | HFW/233/PIM/1999 01.07.2000 | 28.07.2000 |
| 57. | Dr. Kumar K. | HFW/ 16/PIM/2001 27.08.2001 | 27.09.2001 |
| 58. | Dr. Reshma Faran | HFW/ 16/PIM/2001 27.08.2001 | 27.09.2001 |

| Sl.No. | Name of the Doctors | Govt. Order No. & Date | Date of Duty Report |
|---|---|---|---|
| 59. | Dr. Shubha K.G. | HFW/ 86/PIM/2000 29.06.2000 | 14.07.2000 |
| 60. | Dr. Srikanth B. Sunadoli | HFW/134/PIM/2001 11.07.2001 | 25.08.2001 |
| 61. | Dr. Komala N. | HFW/134/PIM/2001 13.03.2002 | 19.03.2002 |
| 62. | Dr. Sujatha M. | HFW/134/PIM/2001 11.07.2001 | 25.08.2001 |
| 63. | Dr. Rashmi M.V. | HFW/134/PIM/2001 13.03.2002 | 24.03.2002 |
| 64. | Dr. Krishna Prasad | HFW/134/PIM/2001 13.03.2002 | 24.03.2002 |
| 65. | Dr. Sheela J. | HFW/ 63/PIM/2000 17.04.2000 | 23.04.2000 |
| 66. | Dr. Govindaraj N. | HFW/ 63/PIM/2000 17.04.2000 | 02.06.2000 |
| 67. | Dr. Lakshmikanth B.M. | HFW/ 63/PIM/2000 17.04.2000 | 23.04.2000 |
| 68. | Dr. Lakshman Chandrama Mane | HFW/348/PIM/1999 30.11.1999 | 24.02.2000 |
| 69. | Dr. Mallavva Yachcharappa Mulimani | HFW/ 63/PIM/2000 17.04.2000 | 04.05.2000 |
| 70. | Dr. Chandraiah D. | HFW/ 63/PIM/2000 17.04.2000 | 27.04.2000 |
| 71. | Dr. Pavan Kumar T.A. | HFW/ 63/PIM/2000 17.04.2000 | 16.05.2000 |
| 72. | Dr. Babu T.R. | HFW/ 63/PIM/2000 17.04.2000 | 27.04.2000 |
| 73. | Dr. Lakshmikanth S. | HFW/ 63/PIM/2000 17.04.2000 | 20.06.2000 |
| 74. | Dr. Sri Harsha | HFW/ 63/PIM/2000 17.04.2000 | 09.05.2000 |
| 75. | Dr. Shaik Mansur Hussain | HFW/ 63/PIM/2000 17.04.2000 | 20.06.2000 |
| 76. | Dr. Mukunda M.K. | HFW/ 63/PIM/2000 17.04.2000 | 20.06.2000 |
| 77. | Dr. Srikanth S. Elageri | HFW/348/PIM/1999 30.11.1999 | 12.04.2000 |
| 78. | Dr. Udayakumar B. Joshi | HFW/348/PIM/1999 30.11.1999 | 13.01.2000 |
| 79. | Dr. Shivanna A. | HFW/ 63/PIM/2000 17.04.2000 | 24.04.2000 |
| 80. | Dr. Nagapadma | HFW/ 63/PIM/2000 17.04.2000 | 16.05.2000 |
| 81. | Dr. Lokesh M. | HFW/134/PIM/2001 11.07.2001 | 21.06.2001 |
| 82. | Dr. Nagaraj S. | HFW/ 63/PIM/2000 09.11.2001 | 18.11.2001 |
| 83. | Dr. Pushpalatha A.S. | HFW/ 63/PIM/2000 09.11.2001 | 18.11.2001 |
| 84. | Dr. Anuradha B.M. | HFW/ 63/PIM/2000 12.06.2001 | 21.06.2001 |
| 85. | Dr. Mangalasingh A. | HFW/ 63/PIM/2000 09.11.2001 | 18.11.2001 |
| 86. | Dr. Hema D. | HFW/ 63/PIM/2000 09.11.2001 | 17.11.2001 |
| 87. | Dr. Rakesh S.R. | HFW/ 63/PIM/2000 12.06.2001 | 20.06.2001 |
| 88. | Dr. Swarna H.S. | HFW/ 63/PIM/2000 12.06.2001 | 21.06.2001 |
| 89. | Dr. Kishore Babu H.R. | HFW/ 63/PIM/2000 12.06.2001 | 21.06.2001 |
| 90. | Dr. Dinesh R. | HFW/ 63/PIM/2000 17.06.2002 | 25.06.2002 |
| 91. | Dr. Vittal K. Nayak | HFW/ 63/PIM/2000 17.06.2002 | 25.06.2002 |
| 92. | Dr. Hiremath R.N. | HFW/279/PIM/1997 29.11.1999 | 20.11.1999 |
| 93. | Dr. Philomena | HFW/360/PIM/2000 15.05.2002 | 30.05.2002 |
| 94. | Dr. Lokapura B.M. | HFW/360/PIM/2000 15.05.2002 | 08.06.2002 |
| 95. | Dr. Hemu Pujari | HFW/310/PIM/2001 22.02.2003 | 03.04.2003 |
| 96. | Dr. Shivannagowdar B.N. | HFW/233/PIM/1999 29.10.1999 | 13.11.1999 |
| 97. | Dr. Desai V.B. | HFW/502/PIM/1999 03.11.1999 | 13.11.1999 |
| 98. | Dr. Sanjeeva M. Galagali | HFW/ 4/PIM/2001 16.08.2001 | 01.09.2001 |
| 99. | Dr. Bharathi P.B. | HFW/ 4/PIM/2001 16.08.2001 | 01.09.2001 |
| 100. | Dr. Makkalageri Y.N. | HFW/ 4/PIM/2001 16.08.2001 | 28.08.2001 |
| 101. | Dr. Yogesh Madagaoukar | HFW/ 4/PIM/2001 16.08.2001 | 05.09.2001 |
| 102. | Dr. Vijaya M. Thontapura | HFW/ 4/PIM/2001 15.03.2002 | 20.04.2002 |
| 103. | Dr. Arathi C. Hiremath | HFW/632/PIM/2002 03.09.2002 | 07.12.2002 |
| 104. | Dr. Arundhathi R. | HFW/632/PIM/2000 16.08.2001 | 26.09.2001 |
| 105. | Dr. Saraladevi B.N. | HFW/632/PIM/2000 03.09.2002 | 07.12.2002 |
| 106. | Dr. Madhuri Devi | HFW/632/PIM/2000 03.09.2002 | 02.12.2002 |
| 107. | Dr. Mallinath D. | HFW/487/PIM/1999 19.04.2000 | 24.05.2000 |

| Sl.No. | Name of the Doctors | Govt. Order No. & Date | Date of Duty Report |
|---|---|---|---|
| 108. | Dr. Mangala | HFW/632/PIM/2000 16.08.2001 | 26.09.2001 |
| 109. | Dr. Murali Siddanagowda | HFW/632/PIM/2000 03.09.2002 | 09.10.2000 |
| 110. | Dr. Dharbi S.S. | HFW/556/PIM/2002 16.11.2002 | 16.11.2002 |
| 111. | Dr. Padashetty S.N. | HFW/556/PIM/2002 16.11.2002 | 16.11.2002 |
| 112. | Dr. Yogeeshwar Gowda | HFW/632/PIM/2002 03.09.2002 | 26.10.2002 |
| 113. | Dr. Varaprasad K. | HFW/632/PIM/2002 03.09.2002 | 07.10.2002 |
| 114. | Dr. Rameeza Begaum | HFW/632/PIM/2002 03.09.2002 | 05.12.2002 |
| 115. | Dr. Sunanda Arjuna Kudari | HFW/185/PIM/2001 21.05.2001 | 26.06.2001 |
| 116. | Dr. Somashekar | HFW/362/PIM/2000 17.08.2001 | 17.09.2001 |
| 117. | Dr. Thatampudi Paneendra | HFW/279/PIM/1999 27.11.1999 | 20.11.1999 |
| 118. | Dr. Asha | HFW/362/PIM/2000 17.08.2001 | 06.09.2001 |
| 119. | Dr. Nidagundi J.M. | HFW/633/PIM/1996 03.02.1999 | 18.02.1999 |
| 120. | Dr. Ramesh Sajjan | HFW/ 65/PIM/1999 25.06.1999 | 15.07.1999 |
| 121. | Dr. Sudhir Kulageri | HFW/190/PIM/2001 05.05.2001 | 02.06.2001 |
| 122. | Dr. Umashankar Hiremath | HFW/190/PIM/2001 05.05.2001 | 31.05.2001 |
| 123. | Dr. Chidananda Murthy | HFW/190/PIM/2001 05.05.2001 | 31.05.2002 |
| 124. | Dr. Girija Gigiri | HFW/190/PIM/2001 05.05.2001 | 30.05.2001 |
| 125. | Dr. Santhosh Tadapatri | HFW/190/PIM/2001 29.08.2001 | 17.09.2001 |
| 126. | Dr. Giri Ranajit | HFW/488/PIM/1999 03.12.1999 | 19.12.1999 |
| 127. | Dr. Shivakumar | HFW/563/PIM/1998 03.01.2000 | 25.01.2000 |
| 128. | Dr. Vinod Kumar | HFW/563/PIM/1998 03.01.2000 | 25.01.2000 |
| 129. | Dr. Balakrishna | HFW/563/PIM/1998 03.01.2000 | 25.01.2000 |
| 130. | Dr. Vyshali | HFW/497/PIM/2000 31.08.2000 | 01.10.2001 |
| 131. | Dr. Sudhakar Basudhakar | HFW/497/PIM/2000 23.07.2002 | 07.08.2002 |
| 132. | Dr. Prahallada R. ili | HFW/485/PIM/2001 16.11.2002 | 27.12.2002 |
| 133. | Dr. Prapulla K. | HFW/208/PIM/2001 16.11.2002 | 23.12.2002 |
| 134. | Dr. Barakar Sridhar | HFW/ 40/PIM/2000 19.06.2003 | 03.07.2003 |
| 135. | Dr. Vijayalakshmi P. | HFW/ 40/PIM/2000 19.06.2004 | 03.07.2003 |
| 136. | Dr. Roopa Bhat | HFW/ 5/PIM/2001 02.01.2003 | 13.01.2003 |
| | **UNANI** | | |
| 137. | Dr. Syed Fakaruddin Khaji | HFW/775/PIM/2000 10.01.2001 | 24.01.2001 |
| 138. | Dr. Raveendra Mulagoudara | HFW/ 19/PIM/1999 28.11.1999 | 03.07.2001 |
| 139. | Dr. Mohamad Astar Hussain | HFW/310/PIM/2000 07.06.2000 | 27.07.2000 |
| 140. | Dr. Kumar B.N. | HFW/134/PIM/2001 27.09.2001 | 07.10.2001 |
| 141. | Dr. Syed Jainul Abhidin | HFW/497/PIM/2000 31.07.2002 | 17.08.2002 |
| 142. | Dr. Khathija Begum | HFW/497/PIM/2000 31.07.2003 | 17.08.2002 |
| 143. | Dr. Rajeshwar Gonalmath | HFW/190/PIM/2001 15.05.2001 | 01.06.2001 |
| | **HOMOEOPATHY** | | |
| 144. | Dr. Hosamani R.P. | HFW/390/PIM/2000 09.02.2001 | 09.03.2001 |
| 145. | Dr. Nagappanavar | HFW/380/PIM/2000 04.06.2001 | 16.07.2001 |
| 146. | Dr. Girish P. Pashupathimath | HFW/390/PIM/2000 29.09.2001 | 12.10.2001 |
| 147. | Dr. Badeghar A.B. | HFW/524/PIM/2000 10.01.2001 | 01.09.2001 |
| 148. | Dr. Kambalimath C.B. | HFW/233/PIM/1999 13.12.1999 | 21.12.1999 |
| 149. | Dr. Aruna Asuti | HFW/233/PIM/1999 29.10.1999 | 13.11.1999 |
| 150. | Dr. Girish B. Mayannanavar | HFW/ 19/PIM/1999 28.12.1999 | 02.07.2001 |
| 151. | Dr. Rakhi Babu Doddamani | HFW/ 19/PIM/1999 28.12.1999 | 30.07.2001 |
| 152. | Dr. Somashekar H.G. | HFW/478/PIM/1999 01.01.2000 | 10.01.2000 |
| 153. | Dr. Ramadurga N.S. | HFW/632/PIM/2000 16.08.2001 | 20.09.2001 |
| 154. | Dr. Rameshchandra K.B. | HFW/632/PIM/2002 03.09.2002 | 05.10.2002 |

| Sl.No. | Name of the Doctors | Govt. Order No. & Date | Date of Duty Report |
|---|---|---|---|
| 155. | Dr. Reyaz Ahmed | HFW/185/PIM/2001 21.05.2001 | 21.06.2001 |
| 156. | Dr. Pushpa Sangolagi | HFW/497/PIM/2000 04.08.2000 | 12.08.2000 |
| 157. | Dr. Arundathi Kulkarni | HFW/190/PIM/2001 15.05.2001 | 30.05.2001 |
| 158. | Dr. Renuka Kattimani | HFW/190/PIM/2001 15.05.2001 | 30.05.2001 |
| 159. | Dr. Prakash Rajapura | HFW/190/PIM/2001 15.05.2002 | 01.06.2001 |
| 160. | Dr. Roopa I. Reddy | HFW/190/PIM/2001 01.07.2002 | 23.07.2002 |
| 161. | Dr. Sanjay Kulakarni | HFW/190/PIM/2001 01.07.2002 | 25.07.2002 |
| 162. | Dr. Sunitha Pujari | HFW/361/PIM/2001 29.06.2001 | 05.07.2001 |

**CHOMANAYAK G.**
Under Secretary to Government,
Health & Family Welfare Department.

P.R. 575

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಉದ್ದಿಪ್ರಭು, ಹಿಂದಿನ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ, ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಪ್ಪಳ (ಕಡ್ಡಾಯ ನಿವೃತ್ತಿಗೊಳಿಸಲಾಗಿದೆ) ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 170 ಡಿಜಿಡಿ 99, ದಿನಾಂಕ: 22.12.1999 ಹಾಗೂ ಅಧಿಸೂಚನೆ ದಿ: 10.7.2000.
2. ಸೂಚನಾ ಪತ್ರ ಸಂಖ್ಯೆ: ಇಡಿ 170 ಡಿಜಿಡಿ 99 ದಿನಾಂಕ: 22.6.2001.
3. ಶ್ರೀ ಉದ್ದಿಪ್ರಭು ಇವರ ಪ್ರತಿರಕ್ಷಣಾ ಹೇಳಿಕೆ-ಸಲ್ಲಿಸಿಲ್ಲ.
4. ಸರ್ಕಾರಿ ಆದೇಶ ಸಂಖ್ಯೆ: ಇಡಿ 170 ಡಿಜಿಡಿ 99 ದಿನಾಂಕ: 8.10.2001.
5. ಪ್ರಾಂಶುಪಾಲರು, ಸಿಟಿಇ, ಗುಲ್ಬರ್ಗಾ, ಹಾಗೂ ವಿಚಾರಣಾಧಿಕಾರಿ, ಇವರ ವಿಚಾರಣಾ ವರದಿ ಸಂಖ್ಯೆ: ಆ1.ದೂರು: ವಿಚಾರಣೆ 2001-02, ದಿನಾಂಕ: 6.11.2002.
6. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 170 ಡಿಜಿಡಿ 99 ದಿನಾಂಕ: 12.3.2003.
7. ಶ್ರೀ ಉದ್ದಿಪ್ರಭು ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 19.5.2003.
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಿಎಸ್‌ಸಿ 128:ಸಿಎನ್‌ಎಸ್ 2004, ದಿನಾಂಕ: 1.2.2005.

**ಪ್ರಸ್ತಾವನೆ:**

ಶ್ರೀ ಉದ್ದಿಪ್ರಭು, (ಕಡ್ಡಾಯ ನಿವೃತ್ತಿಗೊಳಿಸಲಾಗಿದೆ) ಇವರು ಈ ಹಿಂದೆ ಕೊಪ್ಪಳ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಆರೋಪಗಳ ಮೇರೆಗೆ ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 22.12.99ರ ಆದೇಶದ ಮೂಲಕ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಟ್ಟು, ತದನಂತರ ದಿನಾಂಕ: 10.7.2000ರ ಅಧಿಸೂಚನೆಯಲ್ಲಿ ವಿಚಾರಣೆ ಕಾಯ್ದಿರಿಸಿ, ಅಮಾನತ್ತು ತೆರವು ಮಾಡಿ ಸ್ಥಳನಿಯುಕ್ತಿಗೊಳಿಸಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 22.6.2001 ರಂದು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು 15 ದಿವಸಗಳ ಕಾಲಾವಕಾಶ ನೀಡಲಾಗಿತ್ತು. ಆದರೆ ಸದರಿಯವರು ಆರೋಪಣಾ ಪಟ್ಟಿಗೆ ಸಾಕಷ್ಟು ಸಮಯ ನೀಡಲಾಗಿದ್ದರೂ ಸಹ ಹೇಳಿಕೆ ಸಲ್ಲಿಸಿಲ್ಲ.

2. ಆಪಾದಿತರಾದ, ಶ್ರೀ ಉದ್ದಿಪ್ರಭು ಇವರ ಮೇಲಿನ ಆರೋಪಗಳಿಗೆ ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧಾರ ಕೈಗೊಂಡು ಅದರಂತೆ ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 8.10.2001ರ ಸರ್ಕಾರಿ ಆದೇಶದ ಮೂಲಕ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ಪ್ರಾಂಶುಪಾಲರು, ಸಿಟಿಇ, ಗುಲ್ಬರ್ಗಾ, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಶಿಕ್ಷಣಾಧಿಕಾರಿಯ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಪ್ಪಳ, ಇವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಿ ಆದೇಶಿಸಲಾಗಿತ್ತು.

3. ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ: 6.11.2002 ರಂದು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿನ ನಿರ್ಣಯದಂತೆ ಆಪಾದಿತರ ಮೇಲಿನ ಆರೋಪಗಳು ಸಾಬೀತಾಗಿದ್ದರಿಂದ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಮೇಲೆ ಓದಲಾದ ಕ್ರಮಾಂಕ (6)ರ ದಿನಾಂಕ: 12.3.2003 ರಂದು ಆಪಾದಿತರಿಗೆ ಜಾರಿಗೊಳಿಸಿ ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಆಪಾದಿತರಿಗೆ ಕಾಲಾವಕಾಶ ನೀಡಲಾಗಿತ್ತು. ಸದರಿಯವರು ದಿನಾಂಕ: 19.5.2003 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಸಂಪೂರ್ಣವಾಗಿ ಅಲ್ಲಗಳೆದಿದ್ದಾರೆ.

4. ವಿಚಾರಣಾ ವರದಿಯಲ್ಲಿನ ನಿರ್ಣಯ, ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ ಹೇಳಿಕೆ ಹಾಗೂ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿದ್ದು ಕೆಳಕಂಡ ಆರೋಪಗಳು ಸಾಬೀತಾಗಿದ್ದು, ಆಪಾದಿತರಿಗೆ ದಂಡನೆ ವಿಧಿಸುವುದು ಕೆಸಿಎಸ್‌ಆರ್ ನಿಯಮ 214ರ ವ್ಯಾಪ್ತಿಯಲ್ಲಿ ಬರುವುದರಿಂದ ಮೇಲೆ ಓದಲಾದ ಕ್ರಮಾಂಕ (8)ರ ದಿನಾಂಕ: 1.2.2005 ರಲ್ಲಿ ದಂಡನೆ ವಿಧಿಸುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯಲಾಗಿದೆ.

| | |
|---|---|
| ಆರೋಪ-1 | ಆಪಾದಿತರು ಜವಾಬ್ದಾರಿಯುತ ಅಧಿಕಾರಿಯಾಗಿ ಜಿಲ್ಲಾ ಆಡಳಿತದ ಮೇಲಾಧಿಕಾರಿಗಳೊಂದಿಗೆ ಸಾಮರಸ್ಯವನ್ನು ಕಾಪಾಡಿಕೊಂಡಿರುವುದಿಲ್ಲವೆಂಬುದು ಹಾಗೂ ಸಂಬಂಧ ಹದಗೆಡಲು ಅವರ ಅಶಿಸ್ತು ಕಾರಣವಾಗಿದ್ದು, ವಿಚಾರಣಾಧಿಕಾರಿಗಳು ಆಪಾದಿತರನ್ನು ಆರೋಪದಿಂದ ಮುಕ್ತಿಗೊಳಿಸಲು ಸೂಚಿಸುವ ನಿರ್ಣಯವನ್ನು ತಳ್ಳಿಹಾಕಿ ಆರೋಪವು ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. |
| ಆರೋಪ-2 | ಆಪಾದಿತರು ಜಿಲ್ಲಾ ಪಂಚಾಯತ್‌ನ ಮೇಲಾಧಿಕಾರಿಗಳೊಂದಿಗೆ ಬೇಜವಾಬ್ದಾರಿ ಯುತವಾಗಿ ವರ್ತಿಸಿರುವುದರ ಮೂಲಕ ಎಲ್ಲಾ ಘರ್ಷಣೆಗೆ ದಾರಿ ಮಾಡಿ ಕೊಟ್ಟಿರುವುದು ವ್ಯಕ್ತವಾಗಿದ್ದು, ವಿಚಾರಣಾಧಿಕಾರಿಗಳು ಈ ಬಗ್ಗೆ ನೀಡಿದ ನಿರ್ಣಯವನ್ನು ತಳ್ಳಿಹಾಕಿ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. |
| ಆರೋಪ-4 | ನೇಮಕಾತಿ ಪ್ರಕ್ರಿಯೆಯ ಮುಖ್ಯಸ್ಥರಾಗಿ ಸಂಬಂಧಿಸಿದ ವಹಿಗಳು, ದಾಖಲೆಗಳನ್ನು ಸಮರ್ಪಕವಾಗಿ ನಿರ್ವಹಿಸಬೇಕಾಗಿತ್ತು ಹಾಗೂ ಅಧೀನ ಸಿಬ್ಬಂದಿಗೂ ಸಹ ತಕ್ಕ ಮಾರ್ಗದರ್ಶನ ಮಾಡದೇ ಇರುವುದರಿಂದ ನೇಮಕಾತಿ ಪ್ರಕ್ರಿಯೆಯಲ್ಲಿ ಲೋಪದೋಷ ಉಂಟಾಗಲು ಆಪಾದಿತರು ಕಾರಣರಾಗುವ ಮೂಲಕ ಆರೋಪ ಸಾಬೀತಾಗಿದೆ. |
| ಆರೋಪ-5<br>(ಅ) ಅಭ್ಯರ್ಥಿ ಶ್ರೀ ವೀರನಗೌಡ ಅರ್ಜಿ ಸಂಖ್ಯೆ: 162ರ ಪ್ರಕರಣ | (ಅ) ಶಿಕ್ಷಕರ ನೇಮಕಾತಿ ರದ್ದುಪಡಿಸಲು ಸರ್ಕಾರಕ್ಕೆ ಸಲಹೆಯನ್ನು ನೀಡಿರುವ ಮೂಲಕ ಶ್ರೀ ವೀರನಗೌಡ ಇವರ ನೇಮಕಾತಿಯನ್ನು ನಿಯಮಬಾಹಿರವೆಂದು ಆಪಾದಿತರು ಒಪ್ಪಿದಂತಾಗಿದೆ. ನಿಗದಿತ ವೇಳೆ ಮುಗಿದ ನಂತರ ಆಕ್ಷೇಪಣೆ ಪತ್ರವನ್ನು ತಿರಸ್ಕರಿಸಬೇಕಾಗಿತ್ತು. ಅಲ್ಲದೆ ನಿಗದಿತ ಪ್ರಾಧಿಕಾರಿಗಳಿಂದ ವೈದ್ಯಕೀಯ ಪತ್ರ ಇಲ್ಲವೆಂದು ನಮೂದಿಸಿದ್ದರೂ ಅಂಗವಿಕಲ ಗುಂಪಿನಲ್ಲಿ ಉಪನಿರ್ದೇಶಕರು ಪರಿಗಣಿಸಿದ್ದಾರೆ. ಆದ್ದರಿಂದ ಆರೋಪಿಯನ್ನು ಹೊಣೆಗಾರರನ್ನಾಗಿಸುವುದು ನ್ಯಾಯವಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ಅಭಿಪ್ರಾಯವನ್ನು ತಳ್ಳಿಹಾಕಿ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. |
| (ಆ) ಅಭ್ಯರ್ಥಿ ಶ್ರೀ ಕಾಳೇಶ್ ಹೋರಿ ಅರ್ಜಿ ಸಂ:92ರ ಪ್ರಕರಣ | (ಆ) ನೇಮಕಾತಿ ಪ್ರಕ್ರಿಯೆಯ ಮುಖ್ಯಾಧಿಕಾರಿಯಾಗಿ ಆಪಾದಿತರು ಸ್ವತಃ ಪರಿಶೀಲನೆ ಮಾಡುವಲ್ಲಿ ವಿಫಲರಾಗಿದ್ದರಿಂದ ವಿಚಾರಣಾಧಿಕಾರಿಯವರ ಅಭಿಪ್ರಾಯ ತಳ್ಳಿಹಾಕಿ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. |
| (ಇ) ಅಭ್ಯರ್ಥಿ ಶ್ರೀ ಬಸವರಾಜ ಬೆಲ್ಲದ ಅರ್ಜಿ ಸಂ:106ರ ಪ್ರಕರಣ. | (ಇ) ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿರುವುದನ್ನು ಒಪ್ಪಲಾಗಿದೆ. |
| (ಈ) ಅಭ್ಯರ್ಥಿನಿ ಶ್ರೀಮತಿ ಲಕ್ಷ್ಮೀದೇವಿಟೀಕಾ, ಅರ್ಜಿ ಸಂ:152ರ ಪ್ರಕರಣ | (ಈ) ನೇಮಕಾತಿ ಪ್ರಕ್ರಿಯೆಯ ಮುಖ್ಯಾಧಿಕಾರಿಯಾಗಿ ಆಪಾದಿತರು ಸ್ವತಃ ಪರಿಶೀಲನೆ ನಡೆಸುವಲ್ಲಿ ವಿಫಲರಾಗಿದ್ದಾರೆ. ವಿಚಾರಣಾಧಿಕಾರಿಗಳ ಅಭಿಪ್ರಾಯ ತಳ್ಳಿಹಾಕಿ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. |
| (ಉ) ಅಭ್ಯರ್ಥಿ ಶ್ರೀ ಕರಣಂ ರವೀಂದ್ರ ಅರ್ಜಿ ಸಂ:76ರ ಪ್ರಕರಣ | (ಉ) ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿರುವುದನ್ನು ಒಪ್ಪಲಾಗಿದೆ. |

ಆಪಾದಿತರಾದ ಶ್ರೀ ಉದ್ದಿಪ್ರಭು, ಇವರ ಮೇಲಿನ ಆರೋಪಗಳಲ್ಲಿ 3 ಮುಖ್ಯ ಆರೋಪಗಳು ಹಾಗೂ ಆರೋಪ ಸಂಖ್ಯೆ: 5 ರಲ್ಲಿ ನಮೂದಿಸಿರುವ 5 ಪ್ರಕರಣಗಳು ಸಾಬೀತಾಗಿದೆ. ಆದ್ದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 170 ಡಿಜಿಡಿ 1999, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಉದ್ದಿಪ್ರಭು, ಹಿಂದಿನ ಪ್ರಾಂಶುಪಾಲರು, (ಸಾರ್ವಜನಿಕ ಶಿಕ್ಷಣ ಇಲಾಖಾ ಉಪ ನಿರ್ದೇಶಕರ ವೃಂದ) ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ, (ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ) ಇವರ ಮೇಲಿನ ಸಾಬೀತಾದ ಆರೋಪಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿಯವರ ನಿವೃತ್ತಿ ವೇತನದಲ್ಲಿ ಶೇ.10 ರಷ್ಟನ್ನು (ಶೇಕಡ ಹತ್ತರಷ್ಟು) 2 ವರ್ಷಗಳ (ಎರಡು ವರ್ಷ) ಅವಧಿಗೆ ಕಟಾಯಿಸಲು ಆದೇಶಿಸಿದೆ ಹಾಗೂ ಈ ಪ್ರಕರಣದಲ್ಲಿ ಸದರಿಯವರು **ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿ ಎಂದೇ** ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 631 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇ-1,2).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ತಾಲ್ಲೂಕು ಆಳಂದ, ಜಿಲ್ಲೆ ಗುಲ್ಬರ್ಗಾ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**

1. ಸಮ ಸಂಖ್ಯೆಯ ಪತ್ರ ದಿನಾಂಕ: 9.08.2004.
2. ಜಿಲ್ಲಾ ನೋಂದಣಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರ ವರದಿ ಸಂಖ್ಯೆ: ಡಿ.ಆರ್.ಜಿ:ಆರ್.ಓ.ಎಸ್.: ಇಎನ್‌ಕ್ಯೂ:2004-05:964, ದಿನಾಂಕ: 15.12.2004.
3. ಸಮ ಸಂಖ್ಯೆಯ ಕಾರಣ ಕೇಳುವ ಸೂಚನಾ ಪತ್ರ ದಿನಾಂಕ: 1.1.2005.
4. ಕಾರ್ಯದರ್ಶಿಗಳು, ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ತಾಲ್ಲೂಕು ಆಳಂದ, ಗುಲ್ಬರ್ಗಾ ಜಿಲ್ಲೆ ಇವರ ಉತ್ತರ ದಿನಾಂಕ: 20.1.2005.

**ಪ್ರಸ್ತಾವನೆ:**

ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ತಾಲ್ಲೂಕು ಅಳಂದ, ಗುಲ್ಬರ್ಗಾ ಜಿಲ್ಲೆ ಈ ಸಂಸ್ಥೆಯು, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಪ್ರಕಾರ ಸಂಖ್ಯೆ: 9:63-64 ರಲ್ಲಿ ನೋಂದಾಯಿಸಲ್ಪಟ್ಟಿರುತ್ತದೆ. ದಿನಾಂಕ: 21.07.2004 ರಂದು ಮೇಲ್ಕಂಡ ಸಂಘದ ಸದಸ್ಯರುಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ ಸಂಘದ ನಿಯಮಾವಳಿಯಂತೆ 2004 ರಲ್ಲಿ ಚುನಾವಣೆ ನಡೆಸದೆ ಸುಳ್ಳು ದಾಖಲೆ ಸೃಷ್ಟಿಸಿ, ಚುನಾವಣೆ ನಡೆಸಿದ್ದೇವೆಂದು ಸಂಘದ ಕಾರ್ಯದರ್ಶಿಯವರು ಜಿಲ್ಲಾ ನೋಂದಣಾಧಿಕಾರಿಯವರಿಗೆ ಸಲ್ಲಿಸಲ್ಪಟ್ಟ ಆಡಳಿತ ಮಂಡಳಿಯ ಪಟ್ಟಿ, ಮತದಾರರ ಪಟ್ಟಿಗಳು ಸಂಪೂರ್ಣ ಸುಳ್ಳು ದಾಖಲೆಗಳಾಗಿದ್ದು, 2003 ರಲ್ಲಿ ಆಡಳಿತಾಧಿಕಾರಿಯಾಗಿದ್ದ ತಹಶೀಲ್ದಾರ್, ಅಳಂದ ತಾಲ್ಲೂಕು ಇವರಿಂದ ತಯಾರಿಸಲ್ಪಟ್ಟ, ಮತದಾರರ ಪಟ್ಟಿಯನ್ನು ನಿಯಮಬಾಹಿರವಾಗಿ ತಿದ್ದುಪಡಿ ಮಾಡಿರುವುದರಿಂದ ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಸಂಸ್ಥೆಗೆ ನಿಯಮಾನುಸಾರ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಯನ್ನು ರಚಿಸಲು ಕ್ರಮ ಕೈಗೊಳ್ಳುವಂತೆ ಕೋರಿದ್ದರು.

ಮೇಲಿನ ಆರೋಪಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯಿದೆ 1960ರ ಕಲಂ 25ರ ಪ್ರಕಾರ ತನಿಖೆ ನಡೆಸಿ ಆಡಳಿತಾಧಿಕಾರಿಯನ್ನು ನೇಮಿಸಲು ಬಲವಾದ ಕಾರಣಗಳಿವೆಯೇ? ಎಂಬ ಬಗ್ಗೆ ವರದಿ ಸಲ್ಲಿಸಲು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರನ್ನು ಕೋರಲಾಗಿತ್ತು.

ಮೇಲ್ಕಂಡ ಸಂಸ್ಥೆಯ ವಿಷಯದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಗುಲ್ಬರ್ಗಾ ಇವರು ದಿನಾಂಕ: 27.10.2004 ರಂದು ಸಂಸ್ಥೆಯ ತನಿಖೆ ಕೈಗೊಂಡು ದಾಖಲಾತಿಗಳನ್ನು ಪರಿಶೀಲಿಸಿ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಸಂಘದಲ್ಲಿ ದಿನಾಂಕ: 30.1.2004 ರಂದು ಚುನಾವಣೆಯನ್ನು ನಡೆಸದೆ ಸುಳ್ಳು ದಾಖಲೆಗಳನ್ನು ಸೃಷ್ಟಿಸಿರುವುದರಿಂದ ಹಾಗೂ ಸದರಿ ಕಾರ್ಯಕಾರಿ ಸಮಿತಿಯ ಆಡಳಿತ ಮಂಡಳಿಯ ಅವಧಿಯು 31.12.2004ಕ್ಕೆ ಮುಗಿಯಲಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯಿದೆ 1960ರ ಕಲಂ 27ಎ ಪ್ರಕಾರ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಯವರ ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ, ಸಂಘದ ಆಡಳಿತ ಮಂಡಳಿಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11, 12 ಮತ್ತು 13ನ್ನು ಉಲಂಘಿಸಿರುವುದು ಕಂಡು ಬಂದಿದ್ದರಿಂದ ಸಂಸ್ಥೆಗೆ ಕಲಂ 27ಎ ಪ್ರಕಾರ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಮೇಲೆ (3) ರಲ್ಲಿ ಓದಲಾದ ದಿನಾಂಕ: 1.1.2005 ರಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಸಂಸ್ಥೆಯ ಕಾರ್ಯದರ್ಶಿಯವರು ಮೇಲೆ ಓದಲಾದ (4)ರ ಪತ್ರದಲ್ಲಿ ಉತ್ತರ ಸಲ್ಲಿಸಿದ್ದನ್ನು ಸರ್ಕಾರವು ಪರಿಶೀಲಿಸಿ ಸಂಘದ ಕಾರ್ಯದರ್ಶಿಯವರ ಲಿಖಿತ ಹೇಳಿಕೆಯು ಸಮಂಜಸವಾಗಿರದ ಕಾರಣ ಸಂಘಕ್ಕೆ ವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ನೀಡಲು ಮೇಲ್ಕಂಡ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಮುನೋಸೊ 2004, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್ ತಾಲ್ಲೂಕು ಅಳಂದ, ಗುಲ್ಬರ್ಗಾ ಜಿಲ್ಲೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ (1) (ಸಿ) ಪ್ರಕಾರ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ತಹಶೀಲ್ದಾರ್ ಅಳಂದ ತಾಲ್ಲೂಕು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ನಿಯಮಾನುಸಾರ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿಯಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಕೂಡಲೇ ಸಂಘದ ಕಾರ್ಯಭಾರವನ್ನು ವಹಿಸಿಕೊಂಡು ಸಂಘದ ವ್ಯವಹಾರಗಳನ್ನು ಸರಿಪಡಿಸಿ ನಿಗದಿತ ಅವಧಿಯೊಳಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 632 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಕಾನೂನು ಸಚಿವಾಲಯ

**ವಿಷಯ:** ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ರೋಣ, ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 45 ಎಲ್‌ಎಸಿ 2004, ದಿನಾಂಕ: 28.5.2004.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-106:2005, ದಿನಾಂಕ: 15.03.2005.

**ಪ್ರಸ್ತಾವನೆ:**

ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ರೋಣ ನ್ಯಾಯಾಲಯವನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 21.4.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 22.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 85 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ರೋಣ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 22.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-01-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 634 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ವಿಷಯ:** ತುಮಕೂರು ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(19):2004, ದಿನಾಂಕ: 28.03.2005.

**ಪ್ರಸ್ತಾವನೆ:**

ತುಮಕೂರು ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಂಡಿದೆ.

1) 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. (4ನೇ ನ್ಯಾಯಾಲಯ) ತುಮಕೂರು.
2) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು.
3) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ತಿಪಟೂರು.
4) ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ತುರುವೇಕೆರೆ.
5) ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ಕೊರಟಗೆರೆ.

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಖಾಯಂ ಆಗಿ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿತ್ತು. ಆದರೆ ಈ ನ್ಯಾಯಾಲಯಗಳ ಅವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಂಡಿದ್ದರಿಂದ ಅಧಿಕಾರಿಗಳ ಹಾಗೂ ಸಿಬ್ಬಂದಿ ವರ್ಗಗಳ ಸಂಬಳ ಸಾರಿಗೆಗೆ ತೊಂದರೆಯಾಗುವುದನ್ನು ಮನಗಂಡು, ಈ ನ್ಯಾಯಾಲಯಗಳನ್ನು ದಿನಾಂಕ: 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿ, ನಂತರ ಈ ನ್ಯಾಯಾಲಯಗಳನ್ನು ಖಾಯಂಗೊಳಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 90 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಪ್ರಸ್ತಾವನೆಯಲ್ಲಿ ತಿಳಿಸಿರುವ ತುಮಕೂರು ಜಿಲ್ಲೆಯ ಐದು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 635 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಉಡುಪಿ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: 2-93(14):2005, ದಿನಾಂಕ: 24.03.2005.

**ಪ್ರಸ್ತಾವನೆ:**

ಉಡುಪಿ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಂಡಿದೆ.

1) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕಾರ್ಕಳ.
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಉಡುಪಿ.

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಖಾಯಂ ಆಗಿ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 91 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಉಡುಪಿ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

1) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕಾರ್ಕಳ.
2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಉಡುಪಿ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 636 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಗದಗ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 110 ಎಲ್ಎಸಿ 2003, ದಿನಾಂಕ: 11.6.2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-102(11):2005, ದಿನಾಂಕ: 26.03.2005.

**ಪ್ರಸ್ತಾವನೆ:**

ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಗದಗ ನ್ಯಾಯಾಲಯವನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 24.6.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 25.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 88 ಎಲ್ಎಸಿ 2005, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಗದಗ್ ಜಿಲ್ಲೆಯ ಗದಗದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 25.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 637 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ವಿಷಯ:** 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಬಿಜಾಪುರ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 112 ಎಲ್ಎಸಿ 2003, ದಿನಾಂಕ: 12.6.2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-102(13):2005, ದಿನಾಂಕ: 26.03.2005.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆಯ ಬಿಜಾಪುರ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 24.6.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 26.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 89 ಎಲ್ಎಸಿ 2005, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬಿಜಾಪುರ ಜಿಲ್ಲೆಯ ಬಿಜಾಪುರದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್, ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 25.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 638 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಸಾರಿಗೆ ಸಚಿವಾಲಯ

**ವಿಷಯ:** ಸಾರಿಗೆ ಇಲಾಖೆಯಲ್ಲಿನ 26 ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಸಾರಿಗೆ ಆಯುಕ್ತರ ಪತ್ರದ ಸಂಖ್ಯೆ: ಸಾಆಕ:ಸಿಬ್ಬಂದಿ-1:ಪಿಆರ್-6:98-99, ದಿನಾಂಕ: 27.11.2004ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಾರಿಗೆ ಆಯುಕ್ತರು 26 ಮೋಟಾರು ವಾಹನ ನಿರೀಕ್ಷಕರುಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗೆ ಉನ್ನತೀಕರಿಸುವ ಬಗ್ಗೆ ಕೋರಿದ್ದು ಸದರೀ ಉನ್ನತೀಕರಣ ಈ ಕೆಳಕಂಡ ಕಾರಣಗಳಿಂದ ಅವಶ್ಯಕವೆಂದು ತಿಳಿಸಿರುತ್ತಾರೆ.

ಸಾರಿಗೆ ಇಲಾಖೆಯಲ್ಲಿ ವಾಹನಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿದ್ದು ಬೆಳವಣಿಗೆಯನ್ನು ಅವಲೋಕಿಸಿದಾಗ ಬೆಂಗಳೂರು ನಗರವೊಂದರಲ್ಲಿ 2002-01ನೇ ಸಾಲಿನಲ್ಲಿ 14,73,000 ವಾಹನಗಳಿದ್ದು 2002-03ರ ಸಾಲಿಗೆ 17,82,694 ವಾಹನಗಳ ನೋಂದಣಿಯಾಗಿದ್ದು ಬೆಳವಣಿಗೆ

ಶೇ.7.3 ರಿಂದ 12.3ಕ್ಕೆ ಏರಿರುತ್ತದೆ. ಹಾಗೆಯೇ ರಾಜ್ಯಮಟ್ಟದಲ್ಲಿ ವೀಕ್ಷಿಸಿದಾಗ 2000-01ನೇ ಸಾಲಿನಲ್ಲಿ 36,91,500 ವಾಹನಗಳಿದ್ದು 2002-03ರ ಸಾಲಿಗೆ 44,61,105 ವಾಹನಗಳ ನೋಂದಣಿಯಾಗಿದ್ದು ಇದರಲ್ಲೂ ಸಹ ಶೇಕಡಾವಾರು 7.7 ರಿಂದ 12.2ಕ್ಕೆ ಏರಿಕೆಯಾಗಿರುತ್ತದೆ. ಅಲ್ಲದೇ, ರಾಜಸ್ವ ಸಂಗ್ರಹಣೆಯಲ್ಲಿ 2000-01 ರಲ್ಲಿ ರೂ.473.00 ಕೋಟಿಗಳಿದ್ದು 2002-03ಕ್ಕೆ ರೂ.667.00 ಕೋಟಿ ಸಂಗ್ರಹಣೆ ಆಗಿದ್ದು ಇದರಲ್ಲೂ ಸಹ ಬೆಳವಣಿಗೆ ಹೆಚ್ಚಾಗಿರುತ್ತದೆ.

ಸಾರಿಗೆ ಇಲಾಖೆಯಲ್ಲಿ ಕೆಲವು ಶಾಸನಬದ್ಧ ಕಾರ್ಯಗಳನ್ನು ವಾಹನಗಳ ಅರ್ಹತಾ ಪತ್ರ, ನವೀಕರಣಕ್ಕೆ ವಾಹನಗಳನ್ನು ತಪಾಸಿಸುವುದು, ಚಾಲನಾ ಪತ್ರಕ್ಕೆ ಅಭ್ಯರ್ಥಿಗಳನ್ನು ಪರೀಕ್ಷೆಗೊಳಪಡಿಸುವುದು, ಪ್ರವರ್ತನ ಕಾರ್ಯಗಳನ್ನು ನಡೆಸುವುದು, ಸಾರ್ವಜನಿಕರಿಗೆ ದಿನನಿತ್ಯ ಸ್ಪಂದಿಸಿ ಕಲಿಕಾ: ಖಾಯಂ ಚಾಲನಾ ಪತ್ರ, ನೋಂದಣಿಗೊಳಗಾದ ಹೊಸ ವಾಹನಗಳನ್ನು ಪರಿಶೀಲಿಸುವುದು, ವಾಯುಮಾಲಿನ್ಯ ತಪಾಸಣಾ ಕೇಂದ್ರ ಹಾಗೂ ಚಾಲನಾ ತರಬೇತಿ ಶಾಲೆಗಳನ್ನು ತಪಾಸಿಸುವುದು ಇವರ ಆದ್ಯ ಕರ್ತವ್ಯವಾಗಿರುತ್ತದೆ.

ಅಲ್ಲದೆ ತನಿಖಾ ಠಾಣೆಗಳಲ್ಲಿ ಪ್ರತಿದಿನ 24 ಗಂಟೆಗಳಲ್ಲಿ ಮೂರು ಪಾಳಿಗಳಲ್ಲಿ ಕಾರ್ಯನಿರ್ವಹಿಸಿ ಸರ್ಕಾರದ ಬೊಕ್ಕಸಕ್ಕೆ ಬರಬೇಕಾದ ರಾಜಸ್ವದ ವಸೂಲಾತಿಯನ್ನು ಸಕ್ರಮವಾಗಿ ನಿರ್ವಹಿಸಬೇಕಾಗಿರುವುದರಿಂದ ಹಿರಿಯ ಮೋಟಾರು ವಾಹನ ನಿರೀಕ್ಷಕರು : ತನಿಖಾಧಿಕಾರಿಗಳು ಸಾರಿಗೆ ಇಲಾಖೆಗೆ ಅನಿವಾರ್ಯವಾಗಿರುತ್ತದೆ. ಆದ್ದರಿಂದ 26 ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗೆ ಉನ್ನತೀಕರಿಸುವುದು ಸೂಕ್ತವೆಂದು ಹಾಗೂ ಸದರೀ ಉನ್ನತೀಕರಣದಿಂದ ಸರ್ಕಾರದ ಬೊಕ್ಕಸಕ್ಕೆ ಒಂದು ವಾರ್ಷಿಕ ವೇತನ ಬಡ್ತಿ ನೀಡುವುದನ್ನು ಹೊರತುಪಡಿಸಿ ಇನ್ನಿತರೆ ಯಾವುದೇ ಆರ್ಥಿಕ ಹೊರೆ ಸರ್ಕಾರಕ್ಕೆ ಇರುವುದಿಲ್ಲವೆಂದೂ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 6 ಸಾಇಸೆ 2005, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

**ಯುನಿಕ್ ಸಂಖ್ಯೆ: 112:2005**

ಮೇಲೆ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಾರಿಗೆ ಇಲಾಖೆಯಲ್ಲಿರುವ ಮೋಟಾರು ವಾಹನ ನಿರೀಕ್ಷಕರುಗಳ ಪೈಕಿ 26 ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.5575-10620 ರಲ್ಲಿ ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನಾಗಿ ಸಾರ್ವಜನಿಕರ ಹಿತದೃಷ್ಟಿಯಿಂದ ಉನ್ನತೀಕರಿಸಲಾಗಿದೆ. ಸೃಜಿಸಲು ಉದ್ದೇಶಿಸಿರುವ 26 ಹುದ್ದೆಗಳನ್ನು ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಉನ್ನತೀಕರಿಸುವ ಮೂಲಕ ಹಾಗೂ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅನುಸರಿಸಿ ತುಂಬಲಾಗುವುದು.

ಈ ಉನ್ನತೀಕರಣದಿಂದಾಗಿ ಮೋಟಾರು ವಾಹನ ನಿರೀಕ್ಷಕರುಗಳ ವೃಂದದಲ್ಲಿನ 26 ಹುದ್ದೆಗಳನ್ನು ಕಡಿತಗೊಳಿಸಲಾಗಿದ್ದು ಹೊಸ ಹುದ್ದೆಗಳನ್ನು ಸೃಜಿಸಲಾಗುವುದಿಲ್ಲ.

ಈ ಮೇಲ್ಕಂಡ ಹುದ್ದೆಗಳ ಉನ್ನತೀಕರಣ, ಸಾರಿಗೆ ಇಲಾಖೆಯ ಸಾಮರ್ಥ್ಯ ರಾಜಸ್ವವನ್ನು ಹೆಚ್ಚಿಸಿ ಸಾರ್ವಜನಿಕರಿಗೆ ಉತ್ತಮ ಸೇವೆ ಕಲ್ಪಿಸುವ ಸಲುವಾಗಿ ಹಾಗೂ ಶಾಸನ ಬದ್ಧ ಕಾರ್ಯಗಳನ್ನು ನಿರ್ವಹಿಸುವ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 6.4.2005ರ ಟಿಪ್ಪಣಿ ಸಂಖ್ಯೆ: ಆಇ 637 ವೆಚ್ಚ-6:2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಪಿ.ಆರ್. 639 ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

## ENERGY SECRETARIAT

**Sub:** Enhancement of Wind Power Capacity from 5 M.W to 5.25 M.W in favour of M/s. Chiranjeevi Wind Energy Limited – Orders relating to:

**Read:**
1) Government order No: DE 26 NCE 1999 dated: 13.5.1999
2) Government Letter No: DE 18 NCE 2002 dated: 02.2.2002.
3) Letter No. KRED/08/CWEL/2005/386 dated 25.2.2005 received from MD, KREDL, Bangalore.

***PREAMBLE:***

In the Government Order read at (1) above, sanction has been accorded to implement 5 M.W. capacity Wind Power Project at Chikkannanahalli Arisinagundi Wind Zone, Chitradurga District by M/s. Chiranjeevi Wind Energy Limited.

In the Government Letter read at (2) above, permission has been accorded for change of site for setting of 5 MW capacity Wind Power Project from Chikkannanahalli Arisinagundi wind zone in Chitradurga District to Gonur Village, Madakaripura Wind zone in Chitradurga District in favour of M/s. Chiranjeevi Wind Energy Limited.

In the letter read (3) above the Managing Director, Karnataka Renewable Energy Development Limited, Bangalore has recommended for enhancement of the Wind Power capacity from 5 M.W. to 5.25 M.W. at Gonur village, Madakaripura Wind zone in Chitradurga District in favour of M/s. Chiranjeevi Wind Energy Limited.

After examining the proposal the following order :

**GOVERNMENT ORDER NO. EN 87 NCE 2005 BANGALORE, DATED 4th April 2005**

Government is pleased to permit for the enhancement of Wind Power capacity from 5 M.W. to 5.25 M.W. in favour of M/s. Chiranjeevi Wind Energy Limited at Gonur village, Madakaripura Wind zone in Chitradurga District.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-607

**SURESH .B. KRISHNAPPANAVAR**

Under Secretary to Government, Energy Department.

**Sub:** Enhancement of Wind Power Capacity from 23 M.W to 84.9 M.W in favour of M/s. Suzlon Energy Limited –Orders relating to:

**Read:**
1) Government order No: DE 26 NCE 1999 dated: 13.5.1999.
2) Government order No: DE 98 NCE 2000 dated: 10.7.2000.
3) Letter No. KRED/08/SEL-HAS/2005/604 dated 06.4.2005 received from MD, KREDL Bangalore.

**PREAMBLE:**

In the Government Order read at (2) above, sanction has been accorded to implement 23 M.W. capacity Wind Power Project at Hassan District by M/s. Suzlon Energy Limited.

In the letter read (3) above the Managing Director, Karnataka Renewable Energy Development Limited, Bangalore has recommended for enhancement of the capacity from 23 M.W. to 84.9 M.W. at Hassan District by M/s. Suzlon Energy Limited.

Hence, the following order :

**GOVERNMENT ORDER NO. EN 102 NCE 2005 BANGALORE, DATED 21st April 2005**

In the circumstances, explained in the preamble and after careful consideration, Government are pleased to permit for the enhancement of Wind Power capacity from 23 M.W. to 84.9 M.W. in favour of M/s. Suzlon Energy Limited at Hassan District as detailed below:

| Sl No. | Geographically Sanctioned areas | | Sanctioned capacities vide Government Order No. DE 98 NCE 2000 dated 10.7.2000 | Poposed rating of WTGs | Enhance-ment of capacity proposed in Stage-I | Total capacity including proposed enhancement |
|---|---|---|---|---|---|---|
| 1 | Hassan Harada-nahalli 23 | Madurgudda-57 D/1 with peaks 1068, 1008 & 1007M | 4.9 MW | 600 KW | 12.5 MW | 17.40 MW |
| 2 | | West of Billenahalli & east of Kodihalli-57 C/4 | 7.6 MW | 1500 KW | 13.4 MW | 21 MW |
| 3 | | Somarigudda & South ward ridge-57 C/4 | 4.2 MW | 1500 KW | 21.3 MW | 25.5 MW |
| 4 | | Siege Gudda Southern Shoulder 57 C/4 | 4.9 MW | 1500 KW | 16.1 MW | 21 MW |
| 5 | | Kondali betta 57 C/4 | 1.4 MW | No subject for enhancement | | |
| **TOTAL** | | | **23 MW** | | **63.3 MW** | **84.9 MW** |

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-629

**SURESH .B. KRISHNAPPANAVAR**

Under Secretary to Government, Energy Department.

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆಯ ಪುನರ್‌ಸಂಘಟನೆ ಬಗ್ಗೆ.

**ಓದಲಾಗಿದೆ:**
1. ಉಪ ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರ ಪತ್ರ ಸಂಖ್ಯೆ:ಯು–13:12:6:2001–ಎಂಇಡಿ–1ಪಿಪಿಆರ್, ದಿನಾಂಕ:15–10–2003.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ಅಭಿವೃದ್ಧಿ:47:2004–05, ದಿ:11–05–2004,11–06–2004, 31–01–2005,18–02–2005, ಮತ್ತು 25–02–2005.
3. ಸರ್ಕಾರದ ಪತ್ರ ಸಂಖ್ಯೆ:ಕಾಇ 71 ಎಲ್‌ಎಸ್‌ಐ 2004, ದಿನಾಂಕ:11–08–2004, ದಿ.28–3–05, 5–4–05.
4. ಸರ್ಕಾರಿ ಆದೇಶ ಸಂಖ್ಯೆ:ಕಾಇ 71ಎಲ್‌ಎಸ್‌ಐ 2004, ದಿನಾಂಕ:23–09–2004.

**ಪ್ರಸ್ತಾವನೆ:**

ಉಪ ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಈ ಕೆಳಕಂಡ ಮಾರ್ಗದರ್ಶಿ ಸೂತ್ರಗಳನುಸಾರ ರಾಜ್ಯದಲ್ಲಿನ ಕಾರಾವಿ ಚಿಕಿತ್ಸಾಲಯಗಳನ್ನು ಪುನರ್ ಸಂಘಟಿಸುವ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಿಳಿಸಿದ್ದರು.

1. ಮೂರು ಸಾವಿರಕ್ಕಿಂತ ಕಡಿಮೆ ವಿಮಾದಾರರನ್ನು ಹೊಂದಿರುವ ಹಾಗೂ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಚಿಕಿತ್ಸಾಲಯಗಳ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಕ್ರಮಗಳನ್ನು ತೆಗೆದುಕೊಳ್ಳುವುದು.
   - ಅ) ಮತ್ತೊಂದು ಚಿಕಿತ್ಸಾಲಯವು ಸೂಕ್ತವಾದ ಅಂತರದೊಳಗಿದ್ದು ಸುಲಭವಾಗಿ ಅಲ್ಲಿಗೆ ಹೋಗಲು ಸಾಧ್ಯತೆ ಇದ್ದಲ್ಲಿ ಅಂತಹ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸುವ ಬಗ್ಗೆ ಪರಿಶೀಲಿಸುವುದು.
   - ಆ) ಚಿಕಿತ್ಸಾಲಯವನ್ನು ವಿಲೀನಗೊಳಿಸುವುದು ಕಾರ್ಯಸಾಧ್ಯವಾಗದಿದ್ದಲ್ಲಿ ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿರುವ ಚಿಕಿತ್ಸಾಲಯವನ್ನು ಮುಚ್ಚುವುದು ಹಾಗೂ ಆ ಪ್ರದೇಶದ ಫಲಾನುಭವಿಗಳಿಗಾಗಿ ಐಎಮ್‌ಪಿ ಪದ್ಧತಿಯನ್ನು ಜಾರಿಗೆ ತರುವುದು.
2. ಅಂತಹ ಚಿಕಿತ್ಸಾಲಯಗಳು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಹಾಗೂ 2 ಅಥವಾ 3 ಚಿಕಿತ್ಸಾಲಯಗಳು ಕಾರಾವಿ ನಿಗಮದ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಲ್ಲಿ ಈ ಚಿಕಿತ್ಸಾಲಯಗಳನ್ನು ಒಂದು ಚಿಕಿತ್ಸಾಲಯವಾಗಿ ವಿಲೀನಗೊಳಿಸಿ ಸಿಬ್ಬಂದಿಯನ್ನು ಸೂಕ್ತ ರೀತಿಯಲ್ಲಿ ಹಂಚಿಕೆ ಮಾಡುವುದು. ಚಿಕಿತ್ಸಾಲಯಗಳನ್ನು ಮುಚ್ಚಿದ /ವಿಲೀನಗೊಳಿಸಿದ ನಂತರ ಹೆಚ್ಚುವರಿಯಾಗುಳಿಯುವ ಸಿಬ್ಬಂದಿಯ ಸೇವೆಗಳನ್ನು ರಾಜ್ಯ ಸರ್ಕಾರ ನಡೆಸುತ್ತಿರುವ ಆಸ್ಪತ್ರೆಗಳಲ್ಲಿ ಸಿಬ್ಬಂದಿ ಕಡಿಮೆ ಇರುವ ಸ್ಥಳಗಳಿಗೆ ಉಪಯೋಗಿಸಿಕೊಳ್ಳುವುದು.

ಕಾರಾವಿ ನಿಗಮದ ಮಾರ್ಗದರ್ಶಿ ಸೂತ್ರಗಳ ಆಧಾರದ ಮೇಲೆ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:11–05–2004ರ ತಮ್ಮ ಪತ್ರದಲ್ಲಿ ಅತೀ ಕನಿಷ್ಟ ಸಂಖ್ಯೆಯ ವಿಮಾದಾರರನ್ನು ಹೊಂದಿದ್ದ 08 ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಅಲ್ಲಿನ ವಿಮಾದಾರರಿಗೆ ಐಎಂಪಿ ಪದ್ಧತಿಯ ಮೂಲಕ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಗಣಿಸಿ ಅಂತಹ ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಇಲ್ಲಿನ ವಿಮಾದಾರರು ಹಾಗೂ ಅವರ ಕುಟುಂಬದವರಿಗೆ ಐಎಂಪಿ ಪದ್ಧತಿ ಮೂಲಕ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಮೇಲೆ (3)ರಲ್ಲಿ ಓದಲಾದ ದಿ:11–08–2004ರ ಸರ್ಕಾರಿ ಪತ್ರದಲ್ಲಿ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಅಲ್ಲದೆ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ದಿನಾಂಕ:11–06–2004ರ ತಮ್ಮ ಪತ್ರದಲ್ಲಿ ಸಲ್ಲಿಸಿದ್ದ 3000 ಕ್ಕಿಂತ ಕಡಿಮೆ ವಿಮಾದಾರರಿರುವ ಹಾಗೂ ದಿನವಹಿ ಹಾಜರಾತಿ ಅತೀ ಕನಿಷ್ಠವಾಗಿರುವ 23 ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಸಮೀಪದಲ್ಲಿರುವ ಕಾರಾವಿ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಕ್ಕೆ ಲಗತ್ತಿಸಲಾದ ಅನುಬಂಧದಲ್ಲಿರುವ 23 ಚಿಕಿತ್ಸಾಲಯಗಳನ್ನು ಅವುಗಳ ಮುಂದೆ ನಮೂದಿಸಲಾದ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸಲು ಆದೇಶಿಸಲಾಗಿದೆ. ಆನಂತರ ಮೇಲೆ (3)ರಲ್ಲಿ ಓದಲಾದ ದಿನಾಂಕ:28–03–2005ರ ಸರ್ಕಾರಿ ಪತ್ರದಲ್ಲಿ ಹುಲಿಕೋಟೆ, ಮಣಿಪಾಲ್, ರಾಮನಗರ, ಚಿಕಿತ್ಸಾಲಯಗಳನ್ನು ತಾತ್ಕಾಲಿಕವಾಗಿ ಮುಂದುವರಿಸಲು ಹಾಗೂ ದಿನಾಂಕ: 05–04–2005ರ ಸರ್ಕಾರಿ ಪತ್ರದಲ್ಲಿ ಬಾಗಲಕೋಟೆ ಹಾಗೂ ಹುಣಸೂರು ಚಿಕಿತ್ಸಾಲಯಗಳನ್ನು ಕನಿಷ್ಠ 06 ತಿಂಗಳ ಅವಧಿಯವರೆಗೆ ಮುಂದುವರಿಸಲು ಹಾಗೂ ಈ ಅವಧಿಯಲ್ಲಿ ವಿಮಾದಾರರ ಸಂಖ್ಯೆ ಹೆಚ್ಚಾಗದಿದ್ದಲ್ಲಿ ಐಎಂಪಿ ಪದ್ಧತಿಯನ್ನು ಅಳವಡಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:18–02–2005ರ ತಮ್ಮ ಪತ್ರದಲ್ಲಿ ಕಾರಾವಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇದನ್ನು ಹೊರತುಪಡಿಸಿ ಇಲಾಖೆಯಲ್ಲಿನ ಒಟ್ಟಾರೆ ಹುದ್ದೆಗಳ ಮರುವಿಂಗಡಣೆಯ ಬಗ್ಗೆ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ಒಟ್ಟಾರೆ 26 ಕಾರಾವಿ ಚಿಕಿತ್ಸಾಲಯಗಳನ್ನು ವಿಲೀನಗೊಳಿಸಿದ/ಮುಚ್ಚಿದ ನಂತರ ರಾಜ್ಯದಲ್ಲಿ 96 ಕಾರಾವಿ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸಲಿರುವುದರಿಂದ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಅವಶ್ಯಕತೆ ಇರುವ ಕಾರಾವಿ ಆಸ್ಪತ್ರೆ/ ಚಿಕಿತ್ಸಾಲಯಗಳಿಗೆ ಮರುಹಂಚಿಕೆ ಮಾಡುವಂತೆ ಕೋರಿರುತ್ತಾರೆ. ಮುಂದುವರಿದು ರಾಜ್ಯದಲ್ಲಿ ಇದುವರೆಗೂ ಕಾರಾವಿ ಚಿಕಿತ್ಸಾಲಯಗಳ ಪುನರ್‌ಸಂಘಟನೆ ಮಾಡದೇ ಇರುವುದರಿಂದ ಹಲವಾರು ಕಾರಾವಿ ಚಿಕಿತ್ಸಾಲಯಗಳಿಗೆ ಅಗತ್ಯವಾದ ಸಿಬ್ಬಂದಿಯ ಕೊರತೆ ಇದ್ದು ಹಲವಾರು ಕಾರಾವಿ ಚಿಕಿತ್ಸಾಲಯಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಸಿಬ್ಬಂದಿ ಕಾರ್ಯನಿರ್ವಹಿಸುತ್ತಿರುವುದಾಗಿಯೂ ಅಗತ್ಯವಿರುವ ಕಾರಾವಿ ಚಿಕಿತ್ಸಾಲಯಗಳಲ್ಲಿ ಮಂಜೂರಾದ ಹುದ್ದೆಗಳು ಕಡಿಮೆ

ಇರುವುದರಿಂದ ಈ ಚಿಕಿತ್ಸಾಲಯಗಳಿಗೆ ಎರವಲು ಸೇವೆಯ ಮೇಲೆ ಸಿಬ್ಬಂದಿಯನ್ನು ನಿಯೋಜಿಸಿ ಕೆಲಸ ನಿರ್ವಹಿಸಲಾಗುತ್ತಿದ್ದು ಇದರಿಂದ ಇಲಾಖೆಯಲ್ಲಿ ಅತೀ ಹೆಚ್ಚಿನ ಎರವಲು ಸೇವೆಯ ವ್ಯವಸ್ಥೆ ಮಾಡಬೇಕಾಗಿರುತ್ತದೆಯೆಂದು ಅಲ್ಲದೆ ನಿಯೋಜಿಸಲಾದ ಸಿಬ್ಬಂದಿಗೆ ಪ್ರಯಾಣ ವೆಚ್ಚ, ದಿನ ಭತ್ಯೆ ಇತ್ಯಾದಿಗಳನ್ನು ಪಾವತಿ ಮಾಡುತ್ತಿರುವುದರಿಂದ ರಾಜ್ಯ ಸರ್ಕಾರಕ್ಕೆ ಅನಗತ್ಯ ಆರ್ಥಿಕ ಹೊರೆಯೂ ಸಹ ಉಂಟಾಗುತ್ತದೆಯೆಂದು ತಿಳಿಸಿರುತ್ತಾರೆ. ಕಾರಾವಿ ನಿಗಮದ ನಾರಮ್ಸ್ ಹಾಗೂ ಮಾರ್ಗಸೂಚಿಯನ್ವಯ ಹಾಗೂ ವಿಮಾದಾರರ ಸಂಖ್ಯೆ, ವಿಮಾರೋಗಿಗಳ ಸಂಖ್ಯೆ ಭೌಗೋಳಿಕ ಹಿನ್ನೆಲೆ, ಮೊದಲಾದುವುಗಳನ್ನು ಪರಿಗಣಿಸಿ ವಿಮಾದಾರರ ಸಂಖ್ಯೆಯ ಆಧಾರದ ಮೇಲೆ ಅಗತ್ಯವಿರುವ ಸಿಬ್ಬಂದಿಯನ್ನು/ಹುದ್ದೆಗಳನ್ನು ಸಂಬಂಧಿಸಿದ ಕಾರಾವಿ ಚಿಕಿತ್ಸಾಲಯಗಳಿಗೆ ಪುನರ್ ಹಂಚಿಕೆ ಮಾಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಅಲ್ಲದೆ ವೈದ್ಯರು ರಜೆಯ ಮೇಲೆ ತೆರಳಿದ ಸಂದರ್ಭದಲ್ಲಿ ಸಂಬಂಧಿಸಿದ ಕಾರಾವಿ ಚಿಕಿತ್ಸಾಲಯಗಳ ಕಾರ್ಯನಿರ್ವಹಣೆಗಾಗಿ ರಜೆ ಮೀಸಲಾತಿ ಹುದ್ದೆಗಳನ್ನು ಸಂಬಂಧಿಸಿದ ಆಸ್ಪತ್ರೆಗಳಲ್ಲಿ ಕಾಯ್ದಿರಿಸಲೂ ಸಹ ಪ್ರಸ್ತಾಪಿಸಿರುತ್ತಾರೆ. ವಿವಿಧ ಕಾರಾವಿ ಚಿಕಿತ್ಸಾಲಯಗಳಿಗೆ ಅಲ್ಲಿನ ಸ್ಥಳೀಯ ಪರಿಸ್ಥಿತಿಗಳಿಗನುಗುಣವಾಗಿ ಕೆಲಸದ ಸಮಯವನ್ನು ನಿಗದಿಪಡಿಸಲು ಪ್ರಸ್ತಾಪಿಸಿದ್ದು ಕಾರಾವಿ ಆಸ್ಪತ್ರೆಗಳಲ್ಲಿ ವಿವಿಧ ರೋಗಗಳಿಗೆ ಸಂಬಂಧಿಸಿದಂತೆ ಅವಶ್ಯಕವಿರುವ ತಜ್ಞ ವೈದ್ಯಾಧಿಕಾರಿಗಳ ಸಂಖ್ಯೆಯನ್ನೂ ಸಹ ನಿಗದಿಪಡಿಸಲು ಮತ್ತು ಕಾರಾವಿ ಚಿಕಿತ್ಸಾಲಯಗಳ ಸಮರ್ಪಕ ಆಡಳಿತ ನಿರ್ವಾಹಣೆಗಾಗಿ ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳಿಗೆ ಕಾರಾವಿ ಚಿಕಿತ್ಸಾಲಯಗಳನ್ನು ಅನುಬಂಧಿಸುವ ಬಗ್ಗೆ ಸಹ ಪ್ರಸ್ತಾಪಿಸಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 98 ಎಲ್‌ಎಸ್‌ಐ 2005, ಬೆಂಗಳೂರು, ದಿನಾಂಕ: 02-05-2005.**

ಕಾರಾವಿ ಯೋಜನೆಗೊಳಪಟ್ಟ ವಿಮಾದಾರರಿಗೆ ಹಾಗೂ ಅವರ ಕುಟುಂಬದವರಿಗೆ ಉತ್ತಮ ವೈದ್ಯಕೀಯ ಸೌಲಭ್ಯವನ್ನು ಒದಗಿಸುವ ದೃಷ್ಠಿಯಿಂದ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಈ ಆದೇಶಗಳಲ್ಲಿನ ಅನುಬಂಧ 1ರಿಂದ 5 ರಲ್ಲಿರುವಂತೆ ಪುನರ್‌ಸಂಘಟಿಸಲಾಗಿದೆ. ಕಾರಾವಿ ಇಲಾಖೆಗೆ ಮಂಜೂರಾದ ಒಟ್ಟಾರೆ ವೈದ್ಯಕೀಯ ಅರೆ ವೈದ್ಯಕೀಯ, ಲಿಪಿಕ, ಮತ್ತು ಗ್ರೂಪ್ ಡಿ ವರ್ಗದ ಹುದ್ದೆಗಳನ್ನು (ಕಾರಾವಿ ಮಾದರಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ಹಾಗೂ ಮಂಜೂರಾದ ಹುದ್ದೆಗಳನ್ನು ಹೊರತುಪಡಿಸಿ) ಈ ಆದೇಶದ **ಅನುಬಂಧ-1**ರಲ್ಲಿರುವಂತೆ ಕಾರಾವಿ ನಿರ್ದೇಶನಾಲಯ ಹಾಗೂ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ಪುನರ್ ಹಂಚಿಕೆ ಮಾಡಲಾಗಿದೆ.

ಕಾರಾವಿ ಇಲಾಖೆಗೆ ಮಂಜೂರಾದ ಒಟ್ಟಾರೆ ಹುದ್ದೆಗಳ ವಿವರ **ಅನುಬಂಧ-2**ರಂತಿದೆ.

ಕಾರಾವಿ ಚಿಕಿತ್ಸಾಲಯಗಳಲ್ಲಿ ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಕೆಲಸದ ಸಮಯವನ್ನು ಈ ಆದೇಶದ **ಅನುಬಂಧ-3** ರಲ್ಲಿರುವಂತೆ ನಿಗದಿಪಡಿಸಲಾಗಿದೆ.

ಕಾರಾವಿ ಆಸ್ಪತ್ರೆಗಳಿಗೆ ತಜ್ಞತೆಯ ಆಧಾರದ ಮೇಲೆ ಅಗತ್ಯವಿರುವ ತಜ್ಞ ವೈದ್ಯರ ಹುದ್ದೆಗಳನ್ನು ಈ ಆದೇಶದ **ಅನುಬಂಧ-4** ರಲ್ಲಿರುವಂತೆ ಮರುಹಂಚಿಕೆ ಮಾಡಲಾಗಿದೆ.

ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳಿಗೆ **ಅನುಬಂಧ-5**ರಲ್ಲಿರುವಂತೆ ಕಾರಾವಿ ಚಿಕಿತ್ಸಾಲಯಗಳನ್ನು ಅನುಬಂಧಿಸಲಾಗಿದೆ.

ಈಗಾಗಲೇ ಮೇಲೆ (3)ರಲ್ಲಿ ಓದಲಾದ ದಿನಾಂಕ:11-08-2004ರ ಸರ್ಕಾರಿ ಪತ್ರದಲ್ಲಿ ಐಎಂಪಿ ಪದ್ದತಿಯನ್ನು ಅನುಷ್ಠಾನಗೊಳಿಸಲು ಅನುಮತಿ ನೀಡಲಾದ ಕಾರಾವಿ ಚಿಕಿತ್ಸಾಲಯ ಮದ್ದೂರು, ಕನಕಪುರ, ಟಿ.ನರಸೀಪುರ, ಚಾಮರಾಜನಗರ, ಕೊಳ್ಳೇಗಾಲ ಮತ್ತು ಚಳ್ಳಕೆರೆ ಇವುಗಳನ್ನು ಐಎಂಪಿ ಪದ್ದತಿಯನ್ನು ಅನುಷ್ಠಾನಗೊಳಿಸುವವರೆಗೆ ಮುಂದುವರಿಸಲು ಆದೇಶಿಸಲಾಗಿದೆ. ಸದರಿ ಪ್ರದೇಶಗಳಲ್ಲಿನ ವಿಮಾದಾರರಿಗೆ ಐಎಂಪಿ ಪದ್ದತಿಯನ್ನು ಅಳವಡಿಸಿದ ನಂತರ ಈ ಚಿಕಿತ್ಸಾಲಯಗಳನ್ನು ಮುಚ್ಚತಕ್ಕದ್ದು.

ಕಾರಾವಿ ಇಲಾಖೆಯ ಪುನರ್‌ಸಂಘಟನೆಯಿಂದಾಗಿ ಸಂಬಂಧಿಸಿದ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಲ್ಲಿ ಹೆಚ್ಚುವರಿಯಾಗಿ ಉಳಿದಿರುವ ಗ್ರೂಪ್ ಎ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ಅವಶ್ಯವಿರುವ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ವರ್ಗಾವಣೆ ಮಾಡಲು ಅಗತ್ಯವಾದ ಪ್ರಸ್ತಾವನೆಯನ್ನು ಸೂಕ್ತ ಸಮರ್ಥನೆಯೊಂದಿಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ನಿರ್ದೇಶಕರು ಕಾರಾವಿ ಯೋ (ವೈ) ಸೇವೆಗಳು ಇವರು ಸಲ್ಲಿಸತಕ್ಕದ್ದು. ಪ್ರತಿ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ನಿಗದಿಪಡಿಸಲಾದ ಹುದ್ದೆಗಳ ಸಂಖ್ಯೆಗನುಗುಣವಾಗಿ ಗ್ರೂಪ್ ಬಿ, ಸಿ. ಮತ್ತು ಡಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ದಿನಾಂಕ:18-02-2005ರಲ್ಲಿನ ಪ್ರಸ್ತಾವನೆಯೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಅಗತ್ಯವಿರುವ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ವರ್ಗಾಯಿಸುವ ಬಗ್ಗೆ ಪರಿಶೀಲಿಸಿ ನಿರ್ದೇಶಕರ ಹಂತದಲ್ಲಿಯೇ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

ಅನುಬಂಧ-1

ಕಾರಾವಿ ಯೋಜನೆ (ವೈ) ಸೇವೆಗಳ ನಿರ್ದೇಶನಾಲಯ /ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ಮರುಹಂಚಿಕೆ ಮಾಡಲಾಗಿರುವ ಹುದ್ದೆಗಳ ವಿವರ:-

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) |
|---|---|---|
| <br>1.<br>2.<br>3.<br>4.<br>5.<br>6.<br>7.<br>8.<br>9.<br>10.<br>11.<br>12.<br>13.<br>14.<br>15. | ಕಾರಾವಿ ಚಿಕಿತ್ಸಾಲಯ,<br>ಹನುಮಂತನಗರ, ಬೆಂಗಳೂರು<br>ಕೆಂಗೇರಿ, ಬೆಂಗಳೂರು<br>ಮಂಡ್ಯ<br>ಯಮುನಾಪುರ, ಬೆಳಗಾಂ<br>ಗೋಕಾಕ್<br>ಕೊಣ್ಣೂರ್<br>ಬೆಳವಾಡಿ ,ಮೈಸೂರು<br>ಬೆಳಗೊಳ<br>ಕಾರ್ಕಳ<br>ಕುಲಶೇಖರ, ಮಂಗಳೂರು<br>ಕುಂದಾಪುರ<br>ಬಳ್ಳಾರಿ<br>ಗದಗ್<br>ಮಲ್ಕೇಡ್<br>ಮಣಿಪಾಲ್ | ವಿಮಾ ವೈದ್ಯಾಧಿಕಾರಿ - 02<br>ಫಾರ್ಮಾಸಿಸ್ಟ್ - 02<br>ಶುಶ್ರೂಷಕರು - 02<br>ದ್ವಿತೀಯ ದರ್ಜೆ ಸಹಾಯಕರು - 01<br>ಗ್ರೂಪ್ ಡಿ - 03 |
| 1.<br>2.<br>3.<br>4.<br>5.<br>6.<br>7.<br>8.<br>9.<br>10.<br>11. | ಜಾಲಹಳ್ಳಿ, ಬೆಂಗಳೂರು<br>ಜಿಗಣಿ<br>ಅಮ್ಮಸಂದ್ರ, ತುಮಕೂರು ಜಿಲ್ಲೆ.<br>ಮಾರ್ಗನ್ಸ್‌ಗೇಟ್ ಮಂಗಳೂರು<br>ಚಿತ್ರದುರ್ಗ<br>ತಾರಿಹಾಳ<br>ಶಹಬಾದ್ ಟೌನ್<br>ಸೇಡಂ<br>ಪುತ್ತೂರು<br>ರಾಯಚೂರು<br>ಹುಲಿಕೋಟೆ | ವಿಮಾ ವೈದ್ಯಾಧಿಕಾರಿ - 02<br>ಫಾರ್ಮಾಸಿಸ್ಟ್ - 01<br>ಶುಶ್ರೂಷಕರು - 02<br>ದ್ವಿತೀಯ ದರ್ಜೆ ಸಹಾಯಕರು - 01<br>ಗ್ರೂಪ್ ಡಿ - 03 |
| 1.<br>2.<br>3. | ಬಿನ್ನಿಪೇಟೆ, ಬೆಂಗಳೂರು.<br>ಹರಿಹರ<br>ಎಂ.ಎಸ್.ಕೆ.ಮಿಲ್ಸ್ ಗುಲ್ಬರ್ಗಾ | ವಿಮಾ ವೈದ್ಯಾಧಿಕಾರಿ - 03<br>ಫಾರ್ಮಾಸಿಸ್ಟ್ - 02<br>ಶುಶ್ರೂಷಕರು - 02<br>ದ್ವಿತೀಯ ದರ್ಜೆ ಸಹಾಯಕ - 01<br>ಗ್ರೂಪ್ ಡಿ - 04 |
| 1. | ನೆಲಮಂಗಲ | ವಿಮಾ ವೈದ್ಯಾಧಿಕಾರಿ - 03<br>ಫಾರ್ಮಾಸಿಸ್ಟ್ - 01<br>ಶುಶ್ರೂಷಕರು - 02<br>ದ್ವಿತೀಯ ದರ್ಜೆ ಸಹಾಯಕ - 01<br>ಗ್ರೂಪ್ ಡಿ - 03 |
| 1.<br>2.<br>3.<br>4.<br>5. | ಸಿಟಿ ದಾವಣಗೆರೆ<br>ಚನ್ನಪಟ್ಟಣ, ಬೆಂಗಳೂರು(ಗ್ರಾ)<br>ಬಿಜಾಪುರ<br>ಹಾಸನ<br>ಟಿ.ಬಿ.ಡ್ಯಾಂ | ವಿಮಾ ವೈದ್ಯಾಧಿಕಾರಿ - 02<br>ಫಾರ್ಮಾಸಿಸ್ಟ್ - 01<br>ಶುಶ್ರೂಷಕರು - 02<br>ದ್ವಿತೀಯ ದರ್ಜೆ ಸಹಾಯಕ - 01<br>ಗ್ರೂಪ್ ಡಿ - 04 |

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) | |
|---|---|---|---|
| 1. | ರಾಬರ್ಟ್‌ಸನ್‌ಪೇಟೆ ಕೆ.ಜಿ.ಎಫ್. | ವಿಮಾ ವೈದ್ಯಾಧಿಕಾರಿ | 03 |
| | | ಫಾರ್ಮಾಸಿಸ್ಟ್ | 02 |
| | | ಶುಶ್ರೂಷಕರು | 03 |
| | | ದ್ವಿತೀಯ ದರ್ಜೆ ಸಹಾಯಕ | 02 |
| | | ಗ್ರೂಪ್ ಡಿ | 04 |
| 1. | ದಕ್ಷಿಣ ಮೈಸೂರು | ವಿಮಾ ವೈದ್ಯಾಧಿಕಾರಿ | 03 |
| 2. | ಕೊತ್ವಾಲಗಲ್ಲಿ, ಬೆಳಗಾಂ | ಫಾರ್ಮಾಸಿಸ್ಟ್ | 02 |
| 3. | ಪೀರನ್‌ವಾಡಿ, ಬೆಳಗಾಂ | ಶುಶ್ರೂಷಕರು | 02 |
| 4. | ಬನಹಟ್ಟಿ | ದ್ವಿತೀಯ ದರ್ಜೆ ಸಹಾಯಕ | 01 |
| 5. | ಭದ್ರಾವತಿ | ಗ್ರೂಪ್ ಡಿ | 03 |
| 6. | ವಿ.ವಿ.ಪುರಂ, ಮೈಸೂರು. | | |
| 1. | ರಾಮನಗರ, ಬೆಂಗಳೂರು(ಗ್ರಾ) | ವಿಮಾ ವೈದ್ಯಾಧಿಕಾರಿ | 02 |
| 2. | ಹುಣಸೂರು | ಫಾರ್ಮಾಸಿಸ್ಟ್ | 01 |
| 3. | ಬಾಗಲಕೋಟೆ | ಶುಶ್ರೂಷಕರು | 01 |
| | | ದ್ವಿತೀಯ ದರ್ಜೆ ಸಹಾಯಕ | 01 |
| | | ಗ್ರೂಪ್ ಡಿ | 03 |
| 1. | ವಾಡಿ | ವಿಮಾ ವೈದ್ಯಾಧಿಕಾರಿ | 03 |
| 2. | ಕೋಣನಕುಂಟೆ, ಬೆಂಗಳೂರು. | ಫಾರ್ಮಾಸಿಸ್ಟ್ | 02 |
| 3. | ಮಾರತ್‌ಹಳ್ಳಿ, ಬೆಂಗಳೂರು. | ಶುಶ್ರೂಷಕರು | 02 |
| 4. | ವಿಜಯನಗರ, ಬೆಂಗಳೂರು. | ಪ್ರಥಮ ದರ್ಜೆ ಸಹಾಯಕ | 01 |
| 5. | ತುಮಕೂರು | ದ್ವಿತೀಯ ದರ್ಜೆ ಸಹಾಯಕರು | 01 |
| | | ಗ್ರೂಪ್ ಡಿ | 03 |
| 1. | ಎನ್.ಆರ್.ಮೊಹಲ್ಲಾ, ಮೈಸೂರು | ವಿಮಾ ವೈದ್ಯಾಧಿಕಾರಿ | 03 |
| | | ಫಾರ್ಮಾಸಿಸ್ಟ್ | 01 |
| | | ಶುಶ್ರೂಷಕರು | 02 |
| | | ದ್ವಿತೀಯ ದರ್ಜೆ ಸಹಾಯಕರು | 01 |
| | | ಗ್ರೂಪ್ ಡಿ | 04 |
| 1. | ಬೇಲೂರು | ವಿಮಾ ವೈದ್ಯಾಧಿಕಾರಿ | 01 |
| | | ಫಾರ್ಮಾಸಿಸ್ಟ್ | 01 |
| | | ಶುಶ್ರೂಷಕರು | 01 |
| | | ದ್ವಿತೀಯ ದರ್ಜೆ ಸಹಾಯಕರು | 01 |
| | | ಗ್ರೂಪ್ ಡಿ | 03 |
| 1. | ಮುನಿರೆಡ್ಡಿಪಾಳ್ಯ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 03 |
| 2. | ವಿವೇಕನಗರ, ಬೆಂಗಳೂರು. | ಫಾರ್ಮಾಸಿಸ್ಟ್ | 02 |
| 3. | ಕಾಟನ್‌ಪೇಟೆ, ಬೆಂಗಳೂರು. | ಶುಶ್ರೂಷಕರು | 02 |
| 4. | ಕೆ.ಬಿ.ಬಡಾವಣೆ, ದಾವಣಗೆರೆ | ಪ್ರಥಮ ದರ್ಜೆ ಸಹಾಯಕರು | 01 |
| 5. | ಶಿವಮೊಗ್ಗ | ದ್ವಿತೀಯ ದರ್ಜೆ ಸಹಾಯಕರು | 01 |
| 6. | ಕೇಂದ್ರ ಮೈಸೂರು | ಗ್ರೂಪ್ ಡಿ | 04 |
| 7. | ಕರಂಗಲ್‌ಪಾಡಿ, ಮಂಗಳೂರು | | |
| 1. | ಉಡುಪಿ | ವಿಮಾ ವೈದ್ಯಾಧಿಕಾರಿ | 03 |
| 2. | ಧಾರವಾಡ–1 | ಫಾರ್ಮಾಸಿಸ್ಟ್ | 02 |
| | | ಶುಶ್ರೂಷಕರು | 02 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 04 |

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) | |
|---|---|---|---|
| 1.<br>2. | ಹುಬ್ಬಳ್ಳಿ-1<br>ನಂಜನಗೂಡು-1 | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕ<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 04<br>03<br>03<br>01<br>02<br>04 |
| 1.<br>2. | ಅಲಸೂರು, ಬೆಂಗಳೂರು.<br>ಬಸವನಗುಡಿ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕ<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 05<br>04<br>03<br>01<br>02<br>05 |
| 1.<br>2. | ಕೆ.ಆರ್.ಪುರಂ-1, ಬೆಂಗಳೂರು.<br>ಮೈಸೂರು ರಸ್ತೆ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕ<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 04<br>04<br>03<br>01<br>02<br>05 |
| 1. | ಶೇಷಾದ್ರಿಪುರಂ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕರು<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 03<br>02<br>02<br>01<br>02<br>05 |
| 1. | ದ್ಯಾವಸಂದ್ರ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕ<br>ದ್ವಿತೀಯ ದರ್ಜೆ ಸಹಾಯಕರು<br>ಜ್ಯೂನಿಯರ್ ಲ್ಯಾಬ್ ಟೆಕ್ನೀಷಿಯನ್<br>ಗ್ರೂಪ್ ಡಿ | 04<br>03<br>03<br>01<br>02<br>01<br>05 |
| 1. | ಬನಶಂಕರಿ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕರು<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 03<br>03<br>02<br>01<br>02<br>05 |
| 1. | ಬೃಂದಾವನ, ಮೈಸೂರು | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕರು<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 04<br>03<br>02<br>01<br>02<br>04 |
| 1. | ದೊಡ್ಡಬಳ್ಳಾಪುರ | ವಿಮಾ ವೈದ್ಯಾಧಿಕಾರಿ<br>ಫಾರ್ಮಾಸಿಸ್ಟ್<br>ಶುಶ್ರೂಷಕರು<br>ಪ್ರಥಮ ದರ್ಜೆ ಸಹಾಯಕ<br>ದ್ವಿತೀಯ ದರ್ಜೆ ಸಹಾಯಕರು<br>ಗ್ರೂಪ್ ಡಿ | 04<br>02<br>03<br>01<br>02<br>04 |

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) | |
|---|---|---|---|
| 1. | ಸುಬ್ರಮಣ್ಯಪುರ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 02 |
| 2. | ಅತ್ತಿಬೆಲೆ, ಬೆಂಗಳೂರು. | ಫಾರ್ಮಾಸಿಸ್ಟ್ | 02 |
| 3. | ಸಿಂಗಸಂದ್ರ, ಬೆಂಗಳೂರು. | ಶುಶ್ರೂಷಕರು | 02 |
| 4, | ಹೊಸಕೋಟೆ | ಪ್ರಥಮ ದರ್ಜೆ ಸಹಾಯಕರು | 01 |
| 5. | ಆನಂದವಾಡಿ, ಬೆಳಗಾಂ | ದ್ವಿತೀಯ ದರ್ಜೆ ಸಹಾಯಕರು | 01 |
| 6. | ಉದ್ಯಮಬಾಗ್, ಬೆಳಗಾಂ | ಗ್ರೂಪ್ ಡಿ | 03 |
| 1. | ಫ್ರೇಜರ್‌ಟೌನ್, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 04 |
| 2. | ಕೆ.ಆರ್.ಪುರಂ-2, ಬೆಂಗಳೂರು. | ಫಾರ್ಮಾಸಿಸ್ಟ್ | 03 |
| 3. | ಶ್ರೀರಾಮಪುರಂ, ಬೆಂಗಳೂರು. | ಶುಶ್ರೂಷಕರು | 02 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 05 |
| 1. | ರಸೆಲ್ ಮಾರ್ಕೆಟ್-2, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 03 |
| | | ಫಾರ್ಮಾಸಿಸ್ಟ್ | 02 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಜ್ಯೂನಿಯರ್ ಲ್ಯಾಬ್ ಟೆಕ್ನೀಷಿಯನ್ | 01 |
| | | ಗ್ರೂಪ್ ಡಿ | 05 |
| 1. | ರಾಜಾಜಿನಗರ-2, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 03 |
| 2. | ವಿಶ್ವನೀಡಂ, ಬೆಂಗಳೂರು. | ಫಾರ್ಮಾಸಿಸ್ಟ್ | 03 |
| 3. | ವೈಟ್‌ಫೀಲ್ಡ್, ಬೆಂಗಳೂರು. | ಶುಶ್ರೂಷಕರು | 02 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 04 |
| 1. | ರಾಜಾಜಿನಗರ-1, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| 2. | ಮಾಗಡಿರಸ್ತೆ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 05 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 05 |
| 1. | ಪೀಣ್ಯ, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 05 |
| | | ಕಛೇರಿ ಅಧೀಕ್ಷಕರು | 01 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಜ್ಯೂನಿಯರ್ ಲ್ಯಾಬ್ ಟೆಕ್ನೀಷಿಯನ್ | 01 |
| | | ಗ್ರೂಪ್ ಡಿ | 05 |
| 1. | ಯಶವಂತಪುರ, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 05 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಜ್ಯೂನಿಯರ್ ಲ್ಯಾಬ್ ಟೆಕ್ನೀಷಿಯನ್ | 01 |
| | | ಗ್ರೂಪ್ ಡಿ | 05 |

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) | |
|---|---|---|---|
| 1. | ಯಲಹಂಕ, ಬೆಂಗಳೂರು. | ವಿಮಾ ವೈದ್ಯಾಧಿಕಾರಿ | 05 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕರು | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 04 |
| 1. | ದಾಸರಹಳ್ಳಿ, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 06 |
| | | ಕಛೇರಿ ಅಧೀಕ್ಷಕರು | 01 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 05 |
| 1. | ಬೊಮ್ಮನಹಳ್ಳಿ, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 06 |
| | | ಕಛೇರಿ ಅಧೀಕ್ಷಕರು | 01 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 04 |
| 1. | ಬೊಮ್ಮಸಂದ್ರ, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 05 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ವಾಹನ ಚಾಲಕರು | 01 |
| | | ಗ್ರೂಪ್ ಡಿ | 05 |
| 1. | ವಿಲ್ಸನ್‌ಗಾರ್ಡನ್, ಬೆಂಗಳೂರು. | ಉಪಶಸ್ತ್ರ ಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 07 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 04 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಜ್ಯೂನಿಯರ್ ಲ್ಯಾಬ್ ಟೆಕ್ನೀಷಿಯನ್ | 01 |
| | | ಗ್ರೂಪ್ ಡಿ | 05 |
| 1. | ಪೆಣಂಬೂರ್, ಮಂಗಳೂರು | ವಿಮಾ ವೈದ್ಯಾಧಿಕಾರಿ | 04 |
| | | ಫಾರ್ಮಾಸಿಸ್ಟ್ | 02 |
| | | ಶುಶ್ರೂಷಕರು | 02 |
| | | ಪ್ರಥಮ ದರ್ಜೆ ಸಹಾಯಕ | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 04 |

| ಕ್ರಮ ಸಂಖ್ಯೆ | ಚಿಕಿತ್ಸಾಲಯದ ಹೆಸರು | ಮರುಹಂಚಿಕೆ ಮಾಡಿರುವ ಮಂಜೂರಾತಿ ಹುದ್ದೆಗಳು (ಪ್ರತಿ ಚಿಕಿತ್ಸಾಲಯಕ್ಕೆ) | |
|---|---|---|---|
| 1. | ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ, ಬೆಂಗಳೂರು. | ಶಸ್ತ್ರಚಿಕಿತ್ಸಕರು | 01 |
| | | ಉಪಶಸ್ತ್ರಚಿಕಿತ್ಸಕರು | 02 |
| | | ವಿಮಾ ವೈದ್ಯಾಧಿಕಾರಿ | 06 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕರು | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಜೂನಿಯರ್ ಲ್ಯಾಬ್ ಟೆಕ್ನೀಷಿಯನ್ | 03 |
| | | ಗ್ರೂಪ್ ಡಿ | 08 |
| 1. | ಜಯನಗರ, ಬೆಂಗಳೂರು. | ಉಪಶಸ್ತ್ರಚಿಕಿತ್ಸಕರು | 01 |
| | | ವಿಮಾ ವೈದ್ಯಾಧಿಕಾರಿ | 05 |
| | | ಫಾರ್ಮಾಸಿಸ್ಟ್ | 04 |
| | | ಶುಶ್ರೂಷಕರು | 03 |
| | | ಪ್ರಥಮ ದರ್ಜೆ ಸಹಾಯಕರು | 01 |
| | | ದ್ವಿತೀಯ ದರ್ಜೆ ಸಹಾಯಕರು | 02 |
| | | ಗ್ರೂಪ್ ಡಿ | 05 |

**ಕಾರಾವಿ ಆಸ್ಪತ್ರೆಗಳಿಗೆ ಮರು ಹಂಚಿಕೆ ಮಾಡಲಾದ ಮಂಜೂರಾತಿ ಹುದ್ದೆಗಳು**

**ಮರು ಹಂಚಿಕೆ ಮಾಡಲಾದ ಮಂಜೂರಾತಿ ಹುದ್ದೆಗಳು.**

| ಕ್ರ .ಸಂ. | ಹುದ್ದೆಗಳ ಪದನಾಮ | ಕಾರಾವಿ ಆಸ್ಪತ್ರೆ ಇಂದಿರಾ ನಗರ | ಕಾರಾವಿ ಆಸ್ಪತ್ರೆ ಮೈಸೂರು | ಕಾರಾವಿ ಆಸ್ಪತ್ರೆ ಮಂಗ– ಳೂರು | ಕಾರಾವಿ ಆಸ್ಪತ್ರೆ ದಾವಣ– ಗೆರೆ | ಕಾರಾವಿ ಆಸ್ಪತ್ರೆ ಹುಬ್ಬಳ್ಳಿ | ಕಾರಾವಿ ಆಸ್ಪತ್ರೆ ಬೆಳಗಾಂ | ಕಾರಾವಿ ಆಸ್ಪತ್ರೆ ಮತ್ತು ಚಿಕಿತ್ಸಾಲಯ ದಾಂಡೇಲಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | ಶಸ್ತ್ರಚಿಕಿತ್ಸಕರು | 14 | 08 | 03 | 03 | 04 | 03 | 01 |
| 2. | ಉಪಶಸ್ತ್ರ ಚಿಕಿತ್ಸಕರು | 20 | 15 | 10 | 10 | 10 | 10 | 02 |
| 3. | ವಿಮಾ ವೈದ್ಯಾಧಿಕಾರಿ | 32 | 20 | 16 | 14 | 15 | 14 | 12 |
| 4. | ಸಹಾಯಕ ದಂತ ಚಿಕಿತ್ಸಕರು | 02 | 01 | 01 | 01 | 01 | 01 | 01 |
| 5. | ಆಯುರ್ವೇದಿಕ್ ಫಿಜಿಷಿಯನ್ ಗ್ರೇಡ್–1 | 01 | – | – | – | – | – | – |
| 6. | ಆಯುರ್ವೇದಿಕ್ ಫಿಜಿಷಿಯನ್ ಗ್ರೇಡ್–2 | 01 | | | | | | |
| 7. | ಲೇ –ಕಾರ್ಯದರ್ಶಿ | 01 | 01 | 01 | – | 01 | – | – |
| 8. | ಕಛೇರಿ ಅಧೀಕ್ಷಕರು | 03 | 04 | 02 | 02 | 03 | 03 | 01 |
| 9. | ಶು.ಅಧೀಕ್ಷಕರು ದರ್ಜೆ–1 | 01 | 01 | 01 | – | – | – | |
| 10 | ಶು.ಅಧೀಕ್ಷಕರು ದರ್ಜೆ–2 | 08 | 04 | 03 | 02 | 02 | 01 | – |
| 11 | ಫಾರ್ಮಾಸಿಸ್ಟ್ | 16 | 11 | 09 | 09 | 09 | 09 | 06 |
| 12. | ಎ.ಎನ್.ಎಮ್ | 01 | 01 | – | 02 | – | 03 | |
| 13. | ಶುಶ್ರೂಷಕರು | 100 | 38 | 33 | 23 | 25 | 22 | 16 |
| 14. | ಪ್ರ.ದ.ಸಹಾಯಕರು | 11 | 07 | 06 | 05 | 05 | 04 | 02 |
| 15. | ದ್ವಿ.ದ.ಸಹಾಯಕರು | 13 | 06 | 04 | 04 | 04 | 05 | 03 |
| 16. | ಶೀಘ್ರಲಿಪಿಗಾರ | 01 | 01 | 01 | – | – | 01 | – |
| 17. | ಬೆರಳಚ್ಚುಗಾರ | 01 | 01 | 01 | 01 | 01 | – | 01 |
| 18. | ಸೀನಿಯರ್ ಲ್ಯಾಬ್ ಟೆಕ್ನೀಷಿಯನ್ | 02 | – | – | – | 01 | – | – |
| 19. | ಜೂನಿಯರ್ ಲ್ಯಾಬ್ ಟೆಕ್ನೀಷಿಯನ್ | 06 | 04 | 03 | 02 | 02 | 03 | 01 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 20. | ಎಕ್ಸ್‌ರೇ ಟೆಕ್ನೀಷಿಯನ್ | 02 | 01 | 01 | 01 | 02 | 01 | 01 |
| 21. | ರೆಫ್ರಾಕ್ಷನಿಸ್ಟ್ | 02 | – | – | – | – | – | – |
| 22. | ಡೆಂಟಲ್ ಹೈಜನೀಸ್ಟ್ | 01 | – | – |  | – | – | – |
| 23. | ಡೆಂಟಲ್ ಮೆಕಾನಿಕ್ | 01 | – | – | – | – | – | – |
| 24. | ಎಲೆಕ್ಟ್ರೀಷಿಯನ್ | 01 | 01 | – | – | – | – | – |
| 25. | ಡಯಟೀಷಿಯನ್ | 01 | – | – | – | – | – | – |
| 26. | ಆಕ್ಯುಪೇಷನಲ್ ಥೆರಪಿಸ್ಟ್ | 01 |  | – | – | – | – | – |
| 27. | ಹೆಮೋಡಯಾಲಿಸಿಸ್ ಟೆಕ್ನೀಷಿಯನ್ | 02 | – | – | – | – | – | – |
| 28. | ರೇಡಿಯೋಗ್ರಾಫರ್ | 03 | 01 | 02 | 02 | 01 | 01 | – |
| 29. | ಫಿಜಿಯೋಥೆರಪಿಸ್ಟ್ | 02 | 01 | 01 | 01 | 01 | 01 |  |
| 30. | ಡ್ರೈವರ್ಸ್ | 03 | 02 | 02 | 01 | 01 | 02 | 01 |
| 31. | ಗ್ರೂಪ್ ಡಿ, | 103 | 67 ಕ್ಲೀನರ್, ಕುಕ್‌ಮೇಟ್ ಸೇರಿದಂತೆ | 48 | 30ಕ್ಲೀನರ್ ಸೇರಿದಂತೆ | 30 ಕ್ಲೀನರ್ ಸೇರಿದಂತೆ | 25 | 18 |
| 32. | ಜೂನಿಯರ್ ರೇಡಿಯೋಗ್ರಾಫರ್ | – | 02 | – | – | – | – | – |
| 33. | ಲಿನೆನ್‌ಕೀಪರ್ | – | 01 | – | – | – | – | – |
|  | ಕುಕ್ | – | 02 | 02 | 01 | 01 | 04 | – |
| 35. | ಡೆಂಟಲ್ ಟೆಕ್ನೀಷಿಯನ್ |  |  |  | 01 | 01 | – | – |
| 36. | ಬಿ.ಸಿ.ಜಿ.ಟೆಕ್ನೀಷಿಯನ್ | – | – | – | 01 | 01 | – | – |
| 37. | ಆಯುರ್ವೇದಿಕ್ ಫಾರ್ಮಾಸಿಸ್ಟ್ | 1 | – | – | – | – | – | – |

**ಕಾರಾವಿ ಯೋ (ವೈ) ಸೇವೆಗಳು ನಿರ್ದೇಶನಾಲಯ, ರಾಜಾಜಿನಗರ, ಬೆಂಗಳೂರು.**

| ಕ್ರಮ ಸಂಖ್ಯೆ: | ಹುದ್ದೆಗಳ ಹೆಸರು | ಮರು ಹಂಚಿಕೆ ಮಾಡಲಾದ ಮಂಜೂರಾತಿ_ಹುದ್ದೆಗಳ ಸಂಖ್ಯೆ. |
|---|---|---|
| 1. | ನಿರ್ದೇಶಕರು | 01 |
| 2. | ಉಪ ನಿರ್ದೇಶಕರು | 01 |
| 3. | ಸಹಾಯಕ ನಿರ್ದೇಶಕರು | 01 |
| 4. | ಆಡಳಿತಾಧಿಕಾರಿ | 01 |
| 5. | ಲೆಕ್ಕಾಧಿಕಾರಿ | 01 |
| 6. | ಆಡಿಟ್ ಆಫೀಸರ್ | 01 |
| 7. | ಅಕೌಂಟ್ ಸೂಪರಿಂಟೆಂಡೆಂಟ್ | 02 |
| 8. | ವಿಮಾ ವೈದ್ಯಾಧಿಕಾರಿ | 08 |
| 9. | ಕಛೇರಿ ಅಧೀಕ್ಷಕರು | 08 |
| 10. | ಫಾರ್ಮಾಸಿಸ್ಟ್ | 21 |
| 11. | ಚೀಫ್ ಫಾರ್ಮಾಸಿಸ್ಟ್ | 01 |
| 12. | ಲೀಗಲ್ ಅಸಿಸ್ಟೆಂಟ್ | 03 |
| 13. | ಪ್ರಥಮ ದರ್ಜೆ ಸಹಾಯಕರು | 24 |
| 14. | ಆಡಿಟರ್ಸ್ | 04 |
| 15. | ಶೀಘ್ರಲಿಪಿಗಾರರು | 02 |
| 16. | ಸೀನಿಯರ್ ಟೈಪಿಸ್ಟ್ | 03 |
| 17. | ದ್ವಿತೀಯ ದರ್ಜೆ ಸಹಾಯಕರು | 26 |
| 18. | ಬೆರಳಚ್ಚುಗಾರರು | 03 |
| 19. | ವಾಹನ ಚಾಲಕರು | 02 |
| 20. | ಗ್ರೂಪ್ ಡಿ (ವಾಚ್‌ಮನ್ ಮತ್ತು ಗಾರ್ಡನರ್ ಸೇರಿದಂತೆ) | 43 |

**ಹೆಚ್. ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

ಅನುಬಂಧ–2

ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಗೆ ವೃಂದವಾರು ಮಂಜೂರಾದ ಹುದ್ದೆಗಳ ವಿವರ
(ಕಾರಾವಿ ಆಸ್ಪತ್ರೆ ರಾಜಾಜಿನಗರ ಹೊರತುಪಡಿಸಿ)

| ಕ್ರ.ಸಂ. | ಪದನಾಮ | ಹುದ್ದೆಗಳ ಸಂಖ್ಯೆ. |
|---|---|---|
| | **ಗ್ರೂಪ್–ಎ.** | |
| 1. | ನಿರ್ದೇಶಕರು | 01 |
| 2. | ಉಪನಿರ್ದೇಶಕರು | 01 |
| 3. | ಸಹಾಯಕ ನಿರ್ದೇಶಕರು | 01 |
| 4. | ಆಡಳಿತಾಧಿಕಾರಿ | 01 |
| 5. | ಲೇಖಾಧಿಕಾರಿ | 01 |
| 6. | ಶಸ್ತ್ರಚಿಕಿತ್ಸಕರು | 37 |
| 7. | ಉಪಶಸ್ತ್ರಚಿಕಿತ್ಸಕರು | 88 |
| 8. | ವಿಮಾ ವೈದ್ಯಾಧಿಕಾರಿ | 422 |
| 9. | ಸಹಾಯಕ ದಂತ ಚಿಕಿತ್ಸಕರು | 08 |
| 10. | ಆಯುರ್ವೇದ ಫಿಜಿಷಿಯನ್ ದರ್ಜೆ–1 | 01 |
| 11. | ಮುಖ್ಯ ಫಾರ್ಮಾಸಿಸ್ಟ್ | 01 |
| | **ಒಟ್ಟು** | **562** |
| | **ಗ್ರೂಪ್ ಬಿ.** | |
| 1. | ಆಯುರ್ವೇದಿಕ್ ಫಿಜಿಷಿಯನ್ ದರ್ಜೆ–2 | 01 |
| 2. | ಲೇ–ಕಾರ್ಯದರ್ಶಿ | 04 |
| 3. | ಲೆಕ್ಕ ಪರಿಶೋಧನಾಧಿಕಾರಿ | 01 |
| 4. | ಲೇಖಾಧೀಕ್ಷಕರು | 02 |
| 5. | ಶುಶ್ರೂಷಕ ಅಧೀಕ್ಷಕರು ದರ್ಜೆ–1 | 03 |
| | **ಒಟ್ಟು** | 11 |
| | **ಗ್ರೂಪ್ ಸಿ.** | |
| 1. | ಕಛೇರಿ ಅಧೀಕ್ಷಕರು | 29 |
| 2. | ಕಾನೂನು ಸಹಾಯಕರು ಕಂ ಕಛೇರಿ ಅಧೀಕ್ಷಕರು | 03 |
| 3. | ಪ್ರಥಮ ದರ್ಜೆ ಸಹಾಯಕರು | 114 |
| 4. | ಲೆಕ್ಕಪರಿಶೋಧಕರು | 04 |
| 5. | ದ್ವಿತೀಯ ದರ್ಜೆ ಸಹಾಯಕರು | 195 |
| 6. | ಶೀಘ್ರಲಿಪಿಗಾರರು | 06 |
| 7. | ಹಿರಿಯ ಬೆರಳಚ್ಚುಗಾರರು | 03 |
| 8. | ಬೆರಳಚ್ಚುಗಾರರು | 09 |
| 9. | ಶುಶ್ರೂಷಾ ಅಧೀಕ್ಷಕರು ದರ್ಜೆ–2 | 20 |
| 10. | ಶುಶ್ರೂಷಕಿಯರು | 469 |
| 11. | ಎ.ಎನ್.ಎಮ್ | 07 |
| 12. | ಫಾರ್ಮಾಸಿಸ್ಟ್ | 303 |
| 13. | ಆಯುರ್ವೇದಿಕ್ ಫಾರ್ಮಾಸಿಸ್ಟ್ | 01 |
| 14. | ಹಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 03 |
| 15. | ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 29 |
| 16. | ರೇಡಿಯೋಗ್ರಾಫರ್ | 10 |
| 17. | ಜೂನಿಯರ್ ರೇಡಿಯೋಗ್ರಾಫರ್ | 02 |
| 18. | ಕ್ಷ ಕಿರಣ ತಂತ್ರಜ್ಞರು | 09 |
| 19. | ರೆಪ್ರಾಕ್ಷನಿಸ್ಟ್ | 02 |
| 20. | ಫಿಜಿಯೋಥೆರಪಿಸ್ಟ್ | 07 |
| 21. | ಆಕ್ಯೂಪೇಷನ್ ಥೆರಪಿಸ್ಟ್ | 01 |
| 22. | ಡೆಯಟೀಷಿಯನ್ | 01 |
| 23. | ಬಿ.ಸಿ.ಜೆ.ತಂತ್ರಜ್ಞರು | 02 |
| 24. | ಡೆಂಟಲ್ ಹೈಜನಿಸ್ಟ್ | 01 |
| 25. | ಡೆಂಟಲ್ ಟೆಕ್ನೀಷಿಯನ್ | 02 |

| ಕ್ರ.ಸಂ. | ಪದನಾಮ | ಹುದೆಗಳ ಸಂಖ್ಯೆ. |
|---|---|---|
| 26. | ಡೆಂಟಲ್ ಮೆಕಾನಿಕ್ | 01 |
| 27. | ಎಲೆಕ್ಟ್ರೀಷಿಯನ್ | 02 |
| 28. | ಲಿನನ್ ಕೀಪರ್ | 01 |
| 29. | ಹಿಮೋಡಯಾಲಿಸಿಸ್ ಟೆಕ್ನೀಷಿಯನ್ | 02 |
| 30. | ವಾಹನ ಚಾಲಕರು | 15 |
| | **ಒಟ್ಟು** | **1253** |
| | **ಗ್ರೂಪ್ ಡಿ.** | |
| | ಗ್ರೂಪ್ ಡಿ ನೌಕರರು | 737 |

**ಒಟ್ಟಾರೆ ಹುದ್ದೆಗಳು**

| | | |
|---|---|---|
| 1) | ಗ್ರೂಪ್ ಎ | 562 |
| 2) | ಗ್ರೂಪ್ ಬಿ | 11 |
| 3) | ಗ್ರೂಪ್ ಸಿ | 1253 |
| 4) | ಗ್ರೂಪ್ ಡಿ | 737 |
| | **ಒಟ್ಟು** | **2563** |

**ಹೆಚ್. ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

**ಅನುಬಂಧ-3**

**ಕಾರಾವಿ ಚಿಕಿತ್ಸಾಲಯಗಳಿಗೆ ನಿಗಧಿಪಡಿಸಿರುವ ಕೆಲಸದ ವೇಳೆ.**

**ಬೆಳಿಗ್ಗೆ 9.00 ರಿಂದ 12.00 ಗಂಟೆ ಸಂಜೆ 4.00 ರಿಂದ 7.00 ಗಂಟೆ**

ಹನುಮಂತನಗರ, ಬಿನ್ನೀಪೇಟೆ, ಕೋಣನಕುಂಟೆ, ವಿಜಯನಗರ, ಕಾಟನ್‌ಪೇಟೆ, ತುಮಕೂರು, ರಾಜಾಜಿನಗರ-2, ಶೇಷಾದ್ರಿಪುರಂ, ಶ್ರೀರಾಮಪುರಂ, ಬನಶಂಕರಿ, ಜಯನಗರ, ಮೈಸೂರು ರಸ್ತೆ, ಮಾಗಡಿ ರಸ್ತೆ, ಪೀಣ್ಯ, ರಾಜಾಜಿನಗರ-1, ಯಶವಂತಪುರ, ದಾಸರಹಳ್ಳಿ, ಬಸವನಗುಡಿ, ಮುನಿರೆಡ್ಡಿಪಾಳ್ಯ, ವಿವೇಕನಗರ, ಫ್ರೇಜರ್‌ಟೌನ್, ರಸೆಲ್‌ಮಾರ್ಕೆಟ್-1, ಅಲಸೂರು, ವಿಲ್ಸನ್‌ಗಾರ್ಡನ್, ಬೊಮ್ಮನಹಳ್ಳಿ, ಬಳ್ಳಾರಿ, ಚಿತ್ರದುರ್ಗ, ಟಿ.ಬಿ.ಡ್ಯಾಂ, ಕೆ.ಬಿ.ಬಡಾವಣೆ ದಾವಣಗೆರೆ, ಶಿವಮೊಗ್ಗ, ಬಿಜಾಪುರ, ಬನಹಟ್ಟಿ, ಗದಗ್, ಬಾಗಲಕೋಟೆ, ರಾಯಚೂರು, ಸತ್ತೂರು, ಧಾರವಾಡ, ಹುಬ್ಬಳ್ಳಿ-1, ಕೊತ್ವಾಲಗಲ್ಲಿ ಬೆಳಗಾಂ, ಯಮುನಾಪುರ ಬೆಳಗಾಂ, ಗೋಕಾಕ್, ಕೊಣ್ಣೂರ್, ಆನಂದವಾಡಿ (ಶಹಪೂರ್) ಬೆಳಗಾಂ, ಉದ್ಯಮಬಾಗ್ ಬೆಳಗಾಂ.

**ಬೆಳಿಗ್ಗೆ 10.00 ರಿಂದ 1.00 ಗಂಟೆ ಮಧ್ಯಾಹ್ನ 2.00 ರಿಂದ 5.00 ಗಂಟೆ**

ಅಮ್ಮಸಂದ್ರ, ಬೊಮ್ಮಸಂದ್ರ, ಹುಣಸೂರು, ಬೆಳಗೊಳ,

**ಬೆಳಿಗ್ಗೆ 9.00 ರಿಂದ 1.00 ಗಂಟೆ ಮಧ್ಯಾಹ್ನ 3.00 ರಿಂದ 5.00 ಗಂಟೆ**

ಚೆನ್ನಪಟ್ಟಣ, ಮಂಡ್ಯ,

**ಬೆಳಿಗ್ಗೆ 10.00 ರಿಂದ 1.00 ಗಂಟೆ ಮಧ್ಯಾಹ್ನ 3.00 ರಿಂದ 6.00 ಗಂಟೆ**

ರಾಬರ್ಟ್‌ಸನ್‌ಪೇಟೆ, ಕೆ.ಜಿಎಫ್.

**ಬೆಳಿಗ್ಗೆ 9.00 ರಿಂದ 1.00 ಗಂಟೆ ಸಂಜೆ 4.30 ರಿಂದ 6.30 ಗಂಟೆ**

ವಿ.ವಿ.ಪುರಂ ಮೈಸೂರು, ದಕ್ಷಿಣ ಮೈಸೂರು, ಬೆಳವಾಡಿ, ಎನ್.ಆರ್.ಮೊಹಲ್ಲಾ ಮೈಸೂರು, ಕೇಂದ್ರ ಮೈಸೂರು, ಬೃಂದಾವನ ಮೈಸೂರು, ನಂಜನಗೂಡು-1, ಸಿಟಿ ದಾವಣಗೆರೆ, ಹರಿಹರ, ಭದ್ರಾವತಿ,

**ಬೆಳಿಗ್ಗೆ 9.00 ರಿಂದ 12.30 ಗಂಟೆ ಸಂಜೆ 4.00 ರಿಂದ 6.30 ಗಂಟೆ**

ಕಾರ್ಕಳ, ಕುಲಶೇಖರ ಮಂಗಳೂರು, ಕುಂದಾಪುರ, ಮಾರ್ಗನ್ಸ್‌ಗೇಟ್ ಮಂಗಳೂರು, ಪುತ್ತೂರು, ಮಣಿಪಾಲ್, ಕರಂಗಲ್‌ಪಾಡಿ ಮಂಗಳೂರು, ಉಡುಪಿ, ಪಣಂಬೂರು ಮಂಗಳೂರು,

**ಬೆಳಿಗ್ಗೆ 9.00 ರಿಂದ 12.00 ಗಂಟೆ ಮಧ್ಯಾಹ್ನ 3.00 ರಿಂದ 6.00 ಗಂಟೆ**

ಶಹಬಾದ್ ಟೌನ್, ಎಂ.ಎಸ್.ಕೆ.ಮಿಲ್ಸ್, ಗುಲ್ಬರ್ಗಾ, ಮಲ್ಕೇಡ್, ವಾಡಿ, ಸೇಡಂ,

**ಬೆಳಿಗ್ಗೆ 9.00 ರಿಂದ 1.00 ಗಂಟೆ ಮಧ್ಯಾಹ್ನ 2.00 ರಿಂದ 4.00 ಗಂಟೆ**

ಜಾಲಹಳ್ಳಿ, ಕೆಂಗೇರಿ, ಜಿಗಣಿ, ನೆಲಮಂಗಲ, ರಾಮನಗರ, ಸುಬ್ರಮಣ್ಯಪುರ, ವಿಶ್ವನೀಡಂ, ಯಲಹಂಕ, ದೊಡ್ಡಬಳ್ಳಾಪುರ, ಮಾರತ್‌ಹಳ್ಳಿ, ಸಿಂಗಸಂದ್ರ, ಹೊಸಕೋಟೆ, ಅತ್ತಿಬೆಲೆ, ಕೆ.ಆರ್.ಪುರಂ-2, ವೈಟ್‌ಫೀಲ್ಡ್, ದ್ಯಾವಸಂದ್ರ, ಕೆ.ಆರ್.ಪುರಂ-1, ಹಾಸನ, ತಾರಿಹಾಳ, ಹುಲಿಕೋಟೆ,

**ಬೆಳಿಗ್ಗೆ 9.00 ರಿಂದ 1.00 ಗಂಟೆ ಮಧ್ಯಾಹ್ನ 1.30 ರಿಂದ 3.30 ಗಂಟೆ**

ಪೀರನ್‌ವಾಡಿ ಬೆಳಗಾಂ,

**ಹೆಚ್. ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

ಅನುಬಂಧ-4

ಕಾರಾವಿ ಆಸ್ಪತ್ರೆ ಹಾಗೂ ರೋಗಪತ್ತೆ ಹಚ್ಚುವ ಕೇಂದ್ರಕ್ಕೆ ಮರುಹಂಚಿಕೆ ಮಾಡಲಾಗಿರುವ ತಜ್ಞತೆವಾರು ಮಂಜೂರಾತಿ ಹುದ್ದೆಗಳು.

(ಒಟ್ಟಾರೆ ಮರುಹಂಚಿಕೆ ಮಾಡಲಾದ ಹುದ್ದೆಗಳು ಸೇರಿದಂತೆ)

| ಕ್ರ ಸಂ | ತಜ್ಞತೆ | ಕಾರಾವಿ ಆಸ್ಪತ್ರೆ, ಇಂದಿರಾನಗರ | | | ಕಾರಾವಿ ಆಸ್ಪತ್ರೆ, ಮೈಸೂರು | | | ಕಾರಾವಿ ಆಸ್ಪತ್ರೆ, ಮಂಗಳೂರು | | | ಕಾರಾವಿ ಆಸ್ಪತ್ರೆ, ದಾವಣಗೆರೆ | | | ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ | | | ಕಾರಾವಿ ಆಸ್ಪತ್ರೆ, ಬೆಳಗಾಂ | | | ಕಾರಾವಿ ಆಸ್ಪತ್ರೆ, ದಾಂಡೇಲಿ | | | ಕಾರಾವಿ ರೋಗಪತ್ತೆ ಹಚ್ಚುವ ಕೇಂದ್ರ ಬಸವನಗುಡಿ | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪ.ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ. | ಪ್ರಾಧ್ಯಾಪಕರು | ಸ.ಪ್ರಾಧ್ಯಾಪಕರು | ತ.ವೈದ್ಯಾಧಿಕಾರಿ | |
| 1. | ಜನರಲ್ ಮೆಡಿಸನ್ | 2 | 2 | 2 | 1 | 2 | 2 | 1 | 1 | 1 | 1 | 1 | 1 | 1 | 1 | 1 | 1 | 1 | 1 | 1 | 0 | 1 | 1 | 0 | 1 | 27 |
| 2. | ಜನರಲ್ ಸರ್ಜರಿ | 2 | 2 | 3 | 1 | 2 | 2 | 1 | 1 | 1 | 1 | 1 | 1 | 1 | 1 | 2 | 1 | 1 | 1 | 0 | 1 | 1 | 0 | 0 | 1 | 28 |
| 3. | ಕೀಲು ಮತ್ತು ಮೂಳೆ | 2 | 2 | 2 | 1 | 2 | 2 | 0 | 1 | 2 | 0 | 1 | 1 | 0 | 1 | 1 | 0 | 1 | 1 | 0 | 0 | 1 | 0 | 1 | 0 | 22 |
| 4. | ಪ್ರಸೂತಿ ಮತ್ತು ಸ್ತ್ರೀ ರೋಗ | 2 | 3 | 6 | 1 | 2 | 3 | 0 | 1 | 3 | 0 | 1 | 2 | 0 | 1 | 2 | 0 | 1 | 2 | 0 | 1 | 2 | 0 | 1 | 0 | 34 |
| 5. | ಮಕ್ಕಳ ತಜ್ಞತೆ | 1 | 2 | 3 | 1 | 1 | 2 | 1 | 1 | 1 | 1 | 1 | 1 | 0 | 1 | 1 | 0 | 1 | 1 | 0 | 0 | 1 | 0 | 0 | 1 | 22 |
| 6. | ಚರ್ಮ ರೋಗ | 1 | 2 | 2 | 0 | 1 | 1 | 0 | 1 | 1 | 0 | 1 | 1 | 0 | 1 | 1 | 0 | 1 | 1 | 0 | 0 | 1 | 0 | 0 | 1 | 17 |
| 7. | ಕಿವಿ, ಮೂಗು, ಗಂಟಲು | 1 | 2 | 2 | 0 | 1 | 1 | 0 | 1 | 1 | 0 | 1 | 1 | 1 | 1 | 1 | 0 | 1 | 1 | 0 | 0 | 1 | 0 | 0 | 1 | 18 |
| 8. | ನೇತ್ರ | 1 | 1 | 2 | 1 | 1 | 1 | 0 | 0 | 1 | 0 | 1 | 1 | 0 | 1 | 1 | 1 | 1 | 1 | 0 | 0 | 1 | 0 | 0 | 0 | 16 |
| 9. | ರೇಡಿಯಾಲಜಿ | 0 | 2 | 2 | 0 | 1 | 1 | 0 | 1 | 1 | 0 | 1 | 1 | 0 | 1 | 1 | 0 | 1 | 1 | 0 | 0 | 1 | 0 | 0 | 0 | 15 |
| 10 | ಪೆಥಾಲಜಿ | 1 | 1 | 2 | 1 | 1 | 2 | 0 | 1 | 1 | 0 | 0 | 1 | 0 | 0 | 1 | 0 | 0 | 1 | 0 | 0 | 1 | 0 | 0 | 1 | 15 |
| 11 | ಅರಿವಳಿಕೆ | 1 | 1 | 4 | 1 | 1 | 1 | 0 | 1 | 1 | 0 | 1 | 1 | 1 | 1 | 1 | 0 | 1 | 1 | 0 | 0 | 1 | 0 | 0 | 0 | 19 |
| | ಒಟ್ಟು | 14 | 20 | 30 | 08 | 15 | 18 | 3 | 10 | 14 | 3 | 10 | 12 | 4 | 10 | 13 | 3 | 10 | 12 | 1 | 2 | 12 | 1 | 2 | 6 | |
| | ರಜಾ ಮೀಸಲು | 0 | 0 | 2 | 0 | 0 | 2 | 0 | 0 | 2 | 0 | 0 | 2 | 0 | 0 | 2 | 0 | 0 | 2 | 0 | 0 | 0 | 0 | 0 | 0 | 12 |
| | ಒಟ್ಟಾರೆ | 14 | 20 | 32 | 08 | 15 | 20 | 3 | 10 | 16 | 3 | 10 | 14 | 4 | 10 | 15 | 3 | 10 | 14 | 1 | 2 | 12 | 1 | 2 | 6 | |
| | ದಂತ | 0 | 0 | 2 | 0 | 0 | 1 | 0 | 0 | 1 | 0 | 0 | 1 | 0 | 0 | 1 | 0 | 0 | 1 | 0 | 0 | 1 | 0 | 0 | 0 | 8 |
| | ಆಯುರ್ವೇದಿಕ್ | 0 | 0 | 1 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 1 |

**ಹೆಚ್. ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

ಅನುಬಂಧ-5

**ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳಿಗೆ ಅನುಬಂಧಿಸಲಾದ ಕಾರಾವಿ ಚಿಕಿತ್ಸಾಲಯಗಳು.**

**ಕಾರಾವಿ ಆಸ್ಪತ್ರೆ ರಾಜಾಜಿನಗರಕ್ಕೆ ಸಂಬಂಧಪಟ್ಟಂತೆ.**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಯಶವಂತಪುರ**
   ಯಶವಂತಪುರ, ದಾಸರಹಳ್ಳಿ, ಜಾಲಹಳ್ಳಿ, ನೆಲಮಂಗಲ, ತುಮಕೂರು, ಯಲಹಂಕ, ದೊಡ್ಡಬಳ್ಳಾಪುರ, ಅಮ್ಮಸಂದ್ರ.
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ರಾಜಾಜಿನಗರ-1**
   ರಾಜಾಜಿನಗರ-1, ರಾಜಾಜಿನಗರ-2, ಶೇಷಾದ್ರಿಪುರಂ, ವಿಜಯನಗರ, ಶ್ರೀರಾಮಪುರಂ, ವಿಶ್ವನೀಡಂ, ಕಾಟನ್‌ಪೇಟೆ,
3. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಪೀಣ್ಯ.**
   ಪೀಣ್ಯ, ಮೈಸೂರು ರಸ್ತೆ, ಬಿನ್ನಿಪೇಟೆ, ಕೆಂಗೇರಿ, ರಾಮನಗರ, ಚೆನ್ನಪಟ್ಟಣ, ಮಂಡ್ಯ.
4. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಜಯನಗರ.**
   ಜಯನಗರ, ಬಸವನಗುಡಿ, ಕೋಣನಕುಂಟೆ, ಸುಬ್ರಮಣ್ಯಪುರ, ಮಾಗಡಿ ರಸ್ತೆ, ಬನಶಂಕರಿ, ಹನುಮಂತನಗರ, ಜಿಗಣಿ.

**ಕಾರಾವಿ ಆಸ್ಪತ್ರೆ, ಇಂದಿರಾನಗರಕ್ಕೆ ಸಂಬಂಧಪಟ್ಟಂತೆ**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ವಿಲ್ಸನ್‌ಗಾರ್ಡನ್.**
   ವಿಲ್ಸನ್‌ಗಾರ್ಡನ್, ಬೊಮ್ಮಸಂದ್ರ, ಸಿಂಗಸಂದ್ರ, ಅತ್ತಿಬೆಲೆ, ಬೊಮ್ಮನಹಳ್ಳಿ.
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಕೆ.ಆರ್.ಪುರಂ-1**
   ಕೆ.ಆರ್.ಪುರಂ-1, ಕೆ.ಆರ್.ಪುರಂ-2, ಫ್ರೇಜರ್‌ಟೌನ್, ವಿವೇಕನಗರ, ರಸಲ್‌ಮಾರ್ಕೆಟ್-2, ಅಲಸೂರು,
3. ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು,.ದ್ಯಾವಸಂದ್ರ.
   ದ್ಯಾವಸಂದ್ರ, ವೈಟ್‌ಫೀಲ್ಡ್, ಹೊಸಕೋಟೆ, ರಾಬರ್ಟ್‌ಸನ್‌ಪೇಟೆ, ಮಾರತ್‌ಹಳ್ಳಿ, ಮುನಿರೆಡ್ಡಿಪಾಳ್ಯ.

**ಕಾರಾವಿ ಆಸ್ಪತ್ರೆ, ಮೈಸೂರಿಗೆ ಸಂಬಂಧಪಟ್ಟಂತೆ.**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಕೇಂದ್ರ ಮೈಸೂರು.**
   ಕೇಂದ್ರ ಮೈಸೂರು, ದಕ್ಷಿಣ ಮೈಸೂರು, ಎನ್.ಆರ್.ಮೊಹಲ್ಲಾ, ವಿವಿಪುರ ಮೈಸೂರು, ಹಾಸನ್,
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ನಂಜನಗೂಡು-1**
   ನಂಜನಗೂಡು-1, ಹುಣಸೂರು, ಬೆಳವಾಡಿ, ಬೆಳಗೊಳ, ಬೃಂದಾವನ ಮೈಸೂರು,

**ಕಾರಾವಿ ಆಸ್ಪತ್ರೆ, ಮಂಗಳೂರಿಗೆ ಸಂಬಂಧಪಟ್ಟಂತೆ.**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಪೆಣಂಬೂರು ಮಂಗಳೂರು.**
   ಪೆಣಂಬೂರು, ಕುಲಶೇಖರ, ಮಾರ್ಗನ್ಸ್‌ಗೇಟ್, ಕರಂಗಲ್‌ಪಾಡಿ ಮಂಗಳೂರು, ಪುತ್ತೂರು,
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಉಡುಪಿ**
   ಉಡುಪಿ, ಕಾರ್ಕಳ, ಮಣಿಪಾಲ್, ಕುಂದಾಪುರ.

**ಕಾರಾವಿ ಆಸ್ಪತ್ರೆ, ದಾವಣಗೆರೆಗೆ ಸಂಬಂಧಪಟ್ಟಂತೆ.**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಸಿಟಿ ದಾವಣಗೆರೆ,**
   ಸಿಟಿ ದಾವಣಗೆರೆ, ಕೆ.ಬಿ.ಬಡಾವಣೆ, ಹರಿಹರ, ಶಿವಮೊಗ್ಗ, ಭದ್ರಾವತಿ.
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಬಳ್ಳಾರಿ.**
   ಬಳ್ಳಾರಿ, ಟಿ.ಬಿ.ಡ್ಯಾಂ, ಚಿತ್ರದುರ್ಗ,

**ಕಾರಾವಿ ಆಸ್ಪತ್ರೆ, ಹುಬ್ಬಳ್ಳಿಗೆ ಸಂಬಂಧಪಟ್ಟಂತೆ.**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಹುಬ್ಬಳ್ಳಿ-1.**
   ಹುಬ್ಬಳ್ಳಿ 1,ಧಾರವಾಡ-1, ತಾರಿಹಾಳ, ಗದಗ, ಹುಲಿಕೋಟೆ, ಬೇಲೂರು, (ಸತ್ತೂರು)
2. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಬಿಜಾಪುರ.**
   ಬಿಜಾಪುರ, ಬನಹಟ್ಟಿ, ಬಾಗಲಕೋಟೆ,
3. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ವಾಡಿ.**
   ವಾಡಿ, ಸೇಡಂ, ಮಲ್ಖೇಡ್, ಶಹಬಾದ್ ಟೌನ್, ಎಂ.ಎಸ್.ಕೆ. ಮಿಲ್ಸ್, ಗುಲ್ಬರ್ಗಾ, ರಾಯಚೂರು.

**ಕಾರಾವಿ ಆಸ್ಪತ್ರೆ, ಬೆಳಗಾಂಗೆ ಸಂಬಂಧಪಟ್ಟಂತೆ,**

1. **ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು, ಉದ್ಯಮಬಾಗ್ ಬೆಳಗಾಂ.**
   ಉದ್ಯಮಬಾಗ್, ಆನಂದವಾಡಿ, ಕೊತ್ವಾಲಗಲ್ಲಿ, ಯಮುನಾಪುರ, ಪೀರನ್‌ವಾಡಿ ಬೆಳಗಾಂ, ಗೋಕಾಕ್, ಕೊಣ್ಣೂರು.

**ಹೆಚ್. ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

ಪಿ.ಆರ್. 610

## ಇಂಧನ ಸಚಿವಾಲಯ

**ವಿಷಯ:** ಮೆ: ಅತ್ರೆಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ **21** ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಂಇ 208 ಎನ್‌ಸಿಇ 2002 ದಿನಾಂಕ 09.12.2003

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸ0ಖ್ಯೆ: ಕೆಆರ್‌ಇಡಿ/06/ಕೀರ್ತಿಹೊಳೆ/2004/1724 ದಿನಾಂಕ 31.8.2004 / 15.9.2004.

3) ದಿನಾ0ಕ 05.3.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ **21** ಮೆಗಾವ್ಯಾಟ್ ಸಾಮರ್ಥ್ಯದ ಕೀರ್ತಿಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡುವಲ್ಲಿ ಮೆ: ಸುಬಾಶ್ ಕೀರ್ತಿಹೊಳೆ ಪವರ್ ಕಂಪನಿ ಲಿಮಿಟೆಡ್, ರವರು ಯಾವುದೇ ಪ್ರಗತಿ ತೋರಿಸದೆ ಇದ್ದುದರಿಂದ ಯೋಜನೆಯ ಹಂಚಿಕೆಯ ಆದೇಶವನ್ನು ರದ್ದು ಮಾಡಲಾಗಿದೆ.

ಸದರಿ ಯೋಜನೆಯನ್ನು ಮೆ: ಅತ್ರೆಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (3)ರಲ್ಲಿ ತಿಳಿಸಿದಂದು ನಡೆದ ಸಭೆಯಲ್ಲಿ ರಾಜ್ಯ ಉಚ್ಚ ನ್ಯಾಯಾಲಯದ ಅಭಿಪ್ರಾಯ / ಆದೇಶವನ್ನು ಕಾಯ್ದಿರಿಸಿ ಸಮಿತಿಯು ಮೆ. ಅತ್ರೆಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ 21 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಅನುಮೋದಿಸಿದೆ. ಇದನ್ನು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸ0ಖ್ಯೆ: ಇಂಇ 329 ಎನ್‌ಸಿಇ 2004 ಬೆಂಗಳೂರು, ದಿನಾ0ಕ 21ನೇ ಏಪ್ರಿಲ್ 2005.**

ಮೆ: ಅತ್ರೆಯ ಪವರ್ ಕಾರ್ಪೋರೇಷನ್ ಲಿಮಿಟೆಡ್ ಈ ಕ0ಪೆನಿಗೆ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ತೊತ್ತೆಪಲಂ ಗ್ರಾಮದ ಬಳಿ ಕೀರ್ತಿಹೊಳೆಗೆ ಅಡ್ಡಲಾಗಿ **21** ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹ0ಚಿಕೆ ಮಾಡಲಾಗಿದೆ-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನ0ತರ, ಕ0ಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡ0ಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊ0ಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ.25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮ0ಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿ0ಗಳ ಒಳಗಾಗಿ ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿ0ಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಹಿನ್ನೆಲೆಯಲ್ಲಿ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತ0ತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅ0ಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡ0ಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 628 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

